# ಪಂಚಮ

ಸಂಪುಟ : [illegible] ಸಂಚಿಕೆ : 8 ಏಪ್ರಿಲ್ 5, 1983 ಬೆಲೆ-50 ಪೈಸೆ ಪುಟ-12


## ಮೀಸಲಾತಿ ತುತ್ತಿಗೆ ಹೊಸ ಕತ್ತರಿ

ಆದಿಮ ಜನಾಂಗಕ್ಕೆ ಸಿಗುತ್ತಿರುವ ಮೀಸಲಾತಿ ಎಂಬುದು ಸವರ್ಣೀಯರ ಕಣ್ಣಿಗೆ ಸುಣ್ಣವಾಗಿ ಕುಂತಿದೆ. ಸಾರ್ವಜನಿಕ ಬದುಕಿನಿಂದ ಆದಿಮ ಜನಾಂಗವನ್ನು ಸಂಪೂರ್ಣವಾಗಿ ವಂಚಿಸಿದ ಕರಾಳ ಇತಿಹಾಸದ ಭಾರತ ಇಂದು ಮೀಸಲಾತಿ ತಪ್ಪಿಸಲು ನಾನಾ ಆಟವಾಡುತ್ತಿದೆ. ಮೀಸಲಾತಿ ಇದ್ದೂ ಕೇವಲ 18 ಪರ್ಸೆಂಟ್ ದಲಿತರನ್ನು ಎಲ್ಲಾ ಕ್ಷೇತ್ರಗಳಲ್ಲೂ ತುಂಬದಿರುವುದು ಭಾರತದ ಕ್ರೌರ್ಯಕ್ಕೆ ಸಾಕ್ಷಿಯಾಗಿದೆ.

ದಲಿತರಿಗೆ ದಕ್ಕಬೇಕಾದ ಮೀಸಲಾತಿ ತುತ್ತಿಗೆ ಹೊಸತೊಂದು ಕತ್ತರಿ ಈಗ ಚಾಲ್ತಿಗೆ ಬಂದಿದೆ. ಅದೇ ಖೋಟಾ ಸರ್ಟಿಫಿಕೇಟು. ಕರ್ನಾಟಕದಲ್ಲಿ ಕಣ್ಣಿಗೆ ಕಾಣುವಂತೆಯೇ 2000 ಸಾವಿರಕ್ಕೂ ಹೆಚ್ಚು ಜನರು ದಲಿತರೆಂದು ಖೋಟಾ ಸರ್ಟಿಫಿಕೇಟು ಪಡೆದು ಅನುಕೂಲ ಪಡೆದು ದಲಿತರನ್ನು ಅಲ್ಲೂ ವಂಚಿಸಲ್ಪಟ್ಟಿದೆ.

ಈ ಸಂಬಂಧಿಸಿ ದಲಿತ ಸಂಘರ್ಷ ಸಮಿತಿ ಹಿರಿಯ ನಾಯಕರಾದ ಶ್ರೀ ಓ. ಶ್ರೀಧರನ್‌ಗೂ ಮತ್ತು ಜನತಾ ಪಕ್ಷದ ಅಧ್ಯಕ್ಷ ಶ್ರೀ ಚಂದ್ರಶೇಖರ್‌ರಿಗೂ ನಡೆದ ಸಂಭಾಷಣೆಯನ್ನು ನಮ್ಮ ಓದುಗರ ಗಮನಕ್ಕೆ ತರುತ್ತಿದ್ದೇವೆ.

ಓ. ಶ್ರೀಧರನ್ : ದಲಿತರಲ್ಲದವರು ದಲಿತರೆಂದು ಸುಳ್ಳು ಜಾತಿ ಪತ್ರ ಪಡೆದು ನಿಜ ದಲಿತರಿಗೆ ಸಿಗುವ ಅನುಕೂಲ ತಪ್ಪಿಸಿದ್ದಾರೆ. ಇದರ ಬಗ್ಗೆ ಸರ್ಕಾರವು ಹಿಂದಾದುದಕ್ಕೆ ಏನೂ ಕ್ರಮ ಕೈಗೊಳ್ಳುವುದಿಲ್ಲವೆಂದೂ ಮುಂದಾಗುವುದಕ್ಕೆ ಮಾತ್ರ ಕ್ರಮ ಕೈಗೊಳ್ಳುವುದಾಗ್ಯೂ ನಿಶ್ಚಯಿಸಿದೆಯಂತೆ. ಏನಂತೀರಿ ?

ಚಂದ್ರಶೇಖರ್ : ಹೀಗೆ ನಿಶ್ಚಯ ಮಾಡಿರುವುದು ಹಿಂದಿನ ಸರ್ಕಾರ ಇರಬೇಕು.

ಶ್ರೀಧರನ್ : ಇಲ್ಲ, ಇಲ್ಲ. ಜನತಾ ಸರ್ಕಾರದಲ್ಲಿರುವ ಕೆಲವು ಜಾತೀಯ ಪಟ್ಟಭದ್ರರು ಮಾಡುತ್ತಿರುವುದಾಗಿ ತಿಳಿದು ಬಂದಿದೆ.

ಚಂದ್ರಶೇಖರ್ : ಹೇಗೆ ಮಾಡುತ್ತಾರೆ ? ಮುಖ್ಯ ಮಂತ್ರಿಗಳೊಡನೆ ಮಾತಾಡುವೆ.

ಈಗಲಾದರೂ ಸರ್ಕಾರವು ಇದನ್ನು ಸರಿಪಡಿಸಬಹುದು. ಆದರೆ ನಿರ್ಗತಿಕ ದಲಿತರ ತುತ್ತನ್ನು ಕಿತ್ತುಕೊಳ್ಳುತಿರುವ ಕರಾಳ ಹಿಂದೂ ಮನಸ್ಸನ್ನು ಸರಿಪಡಿಸುವುದು ಹೇಗೆ ? ಈ ಪ್ರಶ್ನೆ ಪಶ್ನೆಯಾಗಿಯೇ ಉಳಿಯುವುದೆ ?

—ಬಾಂಬಿ

## ಬೂಟು ಬಂದೂಕಗಳ ಪಹರೆಯಲ್ಲಿ ನಡುಗಿ ನಡೆತ್ತಿಯರುವ 'ಗಾಂಧಿ'

ಎಲ್ಲ ಋತುಗಳನ್ನು ಊಳಿಗಕ್ಕೆ ಇಟ್ಟುಕೊಳ್ಳುವ ಬೆಂಗಳೂರಿನ ಮಾದಕ ಹವೆಗೆ ಈ ಹದಿನೈದು ದಿನಗಳಿಂದ ದಲಿತರ ನಿಟ್ಟುಸಿರು, ಧಿಕ್ಕಾರದಕೂಗುಗಳು ದಗೆ ಹುಟ್ಟಿಸಿವೆ. ಹಬೆಗುಡುವ ನಗರದ ಡಾಂಬರು ಬೀದಿಗಳಲ್ಲಿ ಸಾವಿರ ಸಾವಿರ ದಲಿತ ಕಾಲುಗಳ ಬರವಣಿಗೆ ಮೂಡಿದೆ.

ದಲಿತರ ಸಿಟ್ಟನ್ನು ಮೊಟ್ಟ ಮೊದಲಿಗೆ ಬೀದಿಗೆ ತಂದದ್ದು ದಲಿತ ವಿದ್ಯಾರ್ಥಿ ಒಕ್ಕೂಟ. ಇತಿಹಾಸದ ರಥ ಚಕ್ರಗಳನ್ನು ದಿಕ್ಕು ತಪ್ಪಿಸುವುದು, ದಿಕ್ಕು ತಪ್ಪಿದ ಜಾಡನ್ನು ಕೂಡ ಅಳಿಸಿ ಪಿತೂರಿಗಳ ಸುಳಿವೂ ಸಿಗದಂತೆ ಮಾಡುತ್ತಾ ಬಂದಿರುವ ಪುರೋಹಿತ ಶಾಯಿಯನ್ನು ಬಯಲು ಮಾಡುತ್ತಿರುವ ದಲಿತ ಸಂಘರ್ಷ ಸಮಿತಿ ಪುರೋಹಿತಶಾಹಿ ಮತ್ತು ವಸಾಹತುಶಾಹಿಯ ಕುಟಿಲತೆಯಿಂದ

ಕೆ. ರಾಮಯ್ಯ

ಮಾಡಿದ ಇತ್ತೀಚಿನ 'ಗಾಂಧಿ' ಚಿತ್ರದ ಬಗ್ಗೆ ದಲಿತರಿಗೆ ಎಚ್ಚರಿಕೆ ನೀಡಿತ್ತು. ಕಾಂಗ್ರೆಸ್ ಬ್ರಾಹ್ಮಣಿಕೆ–ಆಂಗ್ಲ ಧಿಮಾಕು ಒಂದುಗೂಡಿದ 'ಗಾಂಧಿ'ಗೆ ಈ ದೇಶದ ದಲಿತರ ಬೆವರು ರಕ್ತದ ಗಳಿಕೆಯ 22 ಕೋಟಿ ರೂಪಾಯಿಗಳನ್ನು ಸುರಿದದ್ದೂ ಅಲ್ಲದೆ ಈ ಜನರ ಬದುಕಿನ ಭಾಗವಾದ ಮಹಾನ್ ನಾಯಕ ಅಂಬೇಡ್ಕರ್‌ರ ಪಾತ್ರವನ್ನು ಕಡೆಗಣಿಸಲಾಯಿತು.

ಗಾಂಧಿಯನ್ನು 'ಮಹಾತ್ಮ'ನಾಗಿಸದೆ ಕೇವಲ 'ಗಾಂಧಿ'ಯಾಗಿ ನೋಡಬೇಕಾದ ದೃಷ್ಟಿಕೋನವನ್ನು ಹುಟ್ಟುಹಾಕಿದ್ದವರು 'ಮಹಾತ್ಮ' ಪಟ್ಟಕ್ಕೆ ಮೊದಲ ಸಿಡಿಮದ್ದು ಇಟ್ಟವರು ಅಂಬೇಡ್ಕರ್. ಈ ನೆಲದ ಬೇರುಗಳನ್ನು ತುಚ್ಛೀಕರಿಸಿ

(10 ನೇ ಪುಟಕ್ಕೆ)

## ಬಾಳುಪೇಟೆ ದಲಿತರ ಮೇಲೆ ಹಿಂದೂ-ಮುಸ್ಲಿಮರ ಹಲ್ಲೆ

ಸಕಲೇಶಪುರ ತಾಲ್ಲೂಕು ಬಾಳುಪೇಟೆಯಲ್ಲಿ ಜಾತೀವಾದಿ ಹಿಂದೂಗಳು, ಮುಸ್ಲಿಮರು ಒಟ್ಟಾಗಿ ಸೇರಿ, ದಲಿತ ಕೇರಿಯ ಮೇಲೆರಗಿ ಮಾರಕ ಅಸ್ತ್ರಗಳಿಂದ ಜನರನ್ನು ಥಳಿಸಿದ್ದಾರೆ. ಇದರಿಂದ ಹತ್ತು ಜನರಿಗಿಂತಲೂ ಹೆಚ್ಚಿಗೆ ಆಸ್ಪತ್ರೆಗೆ ಸೇರುವಂತಾಗಿದೆ. ಹಾಸನ ಜಿಲ್ಲೆಯ ರೈತ ನಾಯಕ ಶಿವಪ್ರಸಾದ್, ತಾಲ್ಲೂಕು ರೈತ ಸಂಘದ ಅಧ್ಯಕ್ಷ ವಿಶ್ವನಾಥ್ ಅವರ ವಿವರಣೆ ಈ ರೀತಿ ಇದೆ : ಜನವರಿ 23, 1983 ರ ಸಂಜೆಯ ಸಮಯದಲ್ಲಿ ದೊಡ್ಡ ಗುಂಪೊಂದು ಬಾಳು ಪೇಟೆಯ ರಸ್ತೆಯಲ್ಲಿ ನಿಂತ ಬಸ್ಸುಗಳನ್ನು ಲಾರಿಗಳನ್ನು ಹುಡುಕುತ್ತ 'ಇಲ್ಲಿ ದಲಿತರ್‍ಯಾರಿದ್ದಾರೆ' ಎಂದು ಕೇಳುತ್ತಿದ್ದರು. ಈರೀತಿ ಹುಡುಕುತ್ತಿದ್ದವರ ಉದ್ದೇಶ ಯಾರಾದರೂ ಗುರ್ತಿರುವ ಅಕ್ಕಪಕ್ಕದ ಊರಿನ ದಲಿತರಿದ್ದರೆ ಅವರನ್ನು ಚೆನ್ನಾಗಿ ಹೊಡೆಯುವುದಾಗಿತ್ತು. ಈ ರೀತಿಯ ಗುಂಪಿಗೆ ಯಾವುದೋ ಶ್ರೀಮಂತ ಎಸ್ಟೇಟ್ ಮಾಲೀಕನೊಬ್ಬನ ಮನೆಯಲ್ಲಿ ಸೇರಿದ್ದ, ಎಂಟೋ ಹತ್ತೋ ಶ್ರೀಮಂತರ ಕುಮ್ಮಕ್ಕಿತ್ತು. ಹೊಡೆಯೋದಕ್ಕೆ ತಯ್ಯಾರಿದ್ದವರೆಲ್ಲ ಮತ್ತೆ ಕೂಲಿ ಮಾಡುವವರು, ಬಡವರೇ ಆದಿ

(2 ನೇ ಪುಟಕ್ಕೆ)

# ನಿರ್ದೇಶಕ ಕೆಸ್ತೂರ್ ಸೋಗಲಾಡಿತನ

## ಪ್ರತಿಕ್ರಿಯೆ

### ದಲಿತರ ಬಗ್ಗೆ ಕುಸಿದ ನಂಬಿಕೆ

ಮಾರ್ಚ್ 5ರ ಪಂಚಮ ಸಂಚಿಕೆಯಲ್ಲಿ "ಪಾದಯಾತ್ರಿ ಚಂದ್ರಶೇಖರ್ ದಲಿತರ ಕುಸಿದ ನಂಬಿಕೆ" ಓದಿ ದಲಿತರ ಬಗ್ಗೆ ನನಗಿರುವ ನಂಬಿಕೆ ಕುಸಿಯುವಂತಾಯಿತು. ಪ್ರತಿಯೊಂದು ವಿಷಯಗಳಲ್ಲೂ ದುಃಖವನ್ನು ಹತಾಶೆಯನ್ನು ಹುಡುಕುವ ದಲಿತರ ನಡಾವಳಿ ಅವರನ್ನು ಎಲ್ಲಿಗೂ ಕೊಂಡೊಯ್ಯಲಾರದು. ಚಂದ್ರಶೇಖರರಂಥ ಧೀಮಂತ ಚಿಂತಕರಿಗೆ ಜಾತಿ ವ್ಯವಸ್ಥೆ ಬಗ್ಗೆ ಗೊತ್ತಿಲ್ಲ ಎಂದು ಜೀಡಿಸುವುದು ಕೇವಲ ಕುಚೋದ್ಯ ಅಷ್ಟೆ. ಖ್ಯಾತ ಪತ್ರಕರ್ತ ಇಂದೂಧರ ಹೊನ್ನಾಪುರ ಅವರು ಎಲ್ಲೂ ಸರಿಯಾಗಿ ಚಂದ್ರಶೇಖರ್ ಮಾತುಗಳನ್ನು ಕೋಟ್ ಮಾಡದೆ ಬರೀ ಕಾಮೆಂಟ್ ಮಾಡಿ ಇಂಡಿಯಾದಲ್ಲಿ ಚಿಗುರುತ್ತಿರುವ ಒಂದು ಹೊಸ ಆಶೆಗೆ ಕಲ್ಲು ಬೀಸಿದ್ದಾರೆ. —ರಾಮ ಕೃಷ್ಣ, ಮಂಗಳೂರು

### ವಿದ್ಯಾರ್ಥಿ ಒಕ್ಕೂಟಕ್ಕೆ ಚಾಲನೆ

ಪೆಬ್ರವರಿ ತಿಂಗಳಲ್ಲಿ ಕೋಲಾರದಲ್ಲಿ ನಡೆದ ದಲಿತ ವಿದ್ಯಾರ್ಥಿ ಒಕ್ಕೂಟದ ರಾಜ್ಯಸಮ್ಮೇಳನ ವಿದ್ಯಾರ್ಥಿ ಸಂಘಟನೆಗೆ ಹೊಸ ಚಾಲನೆ ತಂದು ಕೊಟ್ಟಿದೆ. ಸಂಘಟನೆ ತೀವ್ರಗೊಳಿಸುವ ಸಲುವಾಗಿ ಚರ್ಚಿಸಲು ದಿನಾಂಕ -26-3-83 ರಂದು ಹಾಸನದಲ್ಲಿ ಸೇರಿದ್ದ ಎಲ್ಲಾ ಜಿಲ್ಲೆಗಳ ದಲಿತ ವಿದ್ಯಾರ್ಥಿ ಪ್ರತಿನಿಧಿಗಳು ತಾತ್ಕಾಲಿಕವಾಗಿ ಪದಾಧಿಕಾರಿಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಬೆಂಗಳೂರಿನ ಶ್ರೀ ವೇಲಾಯುಧನ್ ಅವರು ದಲಿತ ವಿದ್ಯಾರ್ಥಿ ಒಕ್ಕೂಟದ ರಾಜ್ಯ ಸಂಚಾಲಕರಾಗಿ ಆಯ್ಕೆಯಾಗಿದ್ದಾರೆ. ಸಹಸಂಚಾಲಕರಾಗಿ ಶ್ರೀನಾಗರಾಜ್ (ಶಿವಮೊಗ್ಗ) ಮತ್ತು ಮಹದೇವ್ (ಗುಲ್ಬರ್ಗಾ) ಅವರೂ ಖಜಾಂಚಿಯಾಗಿ ಶಂಕರ್ (ಹಾಸನ) ಅವರು ಆಯ್ಕೆಯಾಗಿದ್ದಾರೆ.



ಫೆಬ್ರವರಿ 5ರ ಸಂಚಿಕೆಯಲ್ಲಿ "ದಲಿತ ನಿರ್ದೇಶಕ ಬಸವರಾಜಕೆಸ್ತೂರು"ರ ಸಂದರ್ಶನ, ಒಂದು ಹಂತದಲ್ಲಿ ಕೆಸ್ತೂರರ ಸೋಗಲಾಡಿತನದೊಂದಿಗೆ ದರಿದ್ರತನವನ್ನ ಪ್ರದರ್ಶಿಸುತ್ತದೆ. ಇದಕ್ಕೆ ಕಾರಣವಾಗಿ ನಾನೀ ಮಾತುಗಳನ್ನು ಬರೆಯಬೇಕಾಗಿದೆ.

ನಿರ್ದೇಶನದ ಮಾಮೂಲಿ ಫಾರ್ಮುಲಾಗಳಿಗೆ ತೆಕ್ಕೆ ಬಿದ್ದು ಹಳಸಲು ಚಿತ್ರಗಳನ್ನ ಜನಕ್ಕೆ ನೀಡುವ ಈ ದಪ್ಪ ಚರ್ಮದ ಮನುಷ್ಯನ ಕುರಿತು ನಾನು ಚೆನ್ನಾಗಿ ಅರಿತಿದ್ದೇನೆ. ನಾಲ್ಕಾರು ಚಿತ್ರಗಳಿಗೆ ಈತನ ಬಳಿ ಸಹಾಯಕ ಸಹ ನಿರ್ದೇಶಕನಾಗಿ ದುಡಿದು ಹತಾಸೆ, ಜಿಗುಪ್ಸೆಗಳಿಗೀಡಾದ ನನಗಿಂದು ಚಿತ್ರ ಜಗತ್ತಿನ ಬಗ್ಗೆ ಇಡೀ ಕಲ್ಪನೆ ಮುದುಡಿ ಹೋಗಲು ಕೆಸ್ತೂರ್ ಮೂಲ ಕಾರಣ.

ಕೀಳು ಮಟ್ಟದ ರಾಜಕೀಯ ನಡೆಸುತ್ತ, ಹೊಸ ಮುಖ(ಮಿಕ)ಗಳ್ನ ಪರಿಚಯಿಸುವಷ್ಟಂಟಿನಲ್ಲಿ ತನ್ನ ಪ್ರೊಡಕ್ಷನ್ ಟೆಂಟಿಗೆ ಭದ್ರ ತಳಪಾಯ ಹಾಕಿಕೊಳ್ಳುವ ನರಿ ಬುದ್ಧಿಯ ಈ ನಿರ್ದೇಶಕನ ತೆವಲಿಗೆ ಹೊಸ ನಾಯಕಿಯರೇ ಬಲಿ. ಈತನ ಸ್ವಂತ ನಿರ್ಮಾಣದ "ಸ್ವಾಮಿಜ" —"ಯೌವ್ವನದ ಹೊಳೆಯಲ್ಲಿ" (ಇದು ಮೂರ್ನಾಲ್ಕು ವರ್ಷಗಳಿಂದ ಧೂಳು ತಿನ್ನುತ್ತಿದೆ ಡಬ್ಬಾದಲ್ಲಿ) ಬಹುತೇಕ ಹೊಸ ಕಲಾವಿದರೇ. ಭರವಸೆ ಮೂಡಿಸಿದ್ದ 'ಯೌ ಹೊ' ಯ ನಾಯಕಿ ಪ್ರೇಮಶ್ರೀ ಹೇಳ ಹೆಸರಿಲ್ಲದಂತೆ ಅದೇ ಚಿತ್ರಕ್ಕೆ ಕೊನೆಯಾದಳು. ಏಕೆಂದರೆ ಕೆಸ್ತೂರರು ಈಕೆಯಲ್ಲಿ 'ಅಗ್ರಿಮೆಂಟ್' ಮಾಡಿಕೊಂಡಿದ್ದರು. "ಯೌವ್ವನದ ಹೊಳೆಯಲ್ಲಿ ಚಿತ್ರ ಬಿಡುಗಡೆಯಾಗುವರೆಗೂ ಬೇರೆ ಚಿತ್ರಗಳಿಗೆ ಸಹಿ ಹಾಕಬಾರದು ಎಂದು. ಈ ಚಿತ್ರದ ಚಿತ್ರೀಕರಣದ ಪೂರ್ಣ ಈಕೆ ಕೆಸ್ತೂರರ "ಸೊತ್ತಾಗಿದ್ದಳು". ಇದು ಈತನ ಕಲಾವಿದರ್ನ ಕೊಲ್ಲುವ ರೀತಿ.

ಗುಂಡೂರಾಯರ ಸರ್ಕಾರದ ತಿಕಕ್ಕೆ ಗಾಳಿ ಬೀಸಿ "ಅಭಯ ಹಸ್ತ" ಅನ್ನುವ ಕಾಂಗ್ರೆ ಚಿತ್ರ ಮಾಡುವ ಸುದ್ದಿಯಲ್ಲಿದ್ದ ಕೆಸ್ತೂರ್‌ರ ಹಪಹಪಿ ಈಗ ಏನಾಗಿದೆ ?

ಈತನಿಂದ ನಾನು ಪಟ್ಟ ಮಾನಸಿಕ ಹಿಂಸೆ ಯಾತನೆಗಳ ದುಳ್ಳರಿ ಈಗಲೂ ನನ್ನೆದೆಯಲ್ಲಿ ಹಸಿಹಸಿಯಾಗಿದೆ. ಒಂದುವಿಧದಲ್ಲಿ ಈತನಿಗೆ ಥ್ಯಾಂಕ್ಸ್ ಹೇಳಬೇಕಾಗಿದೆ. ನಾನೊಬ್ಬ ಸವರ್ಣೀಯನಾದರೂ ಆ ನೋವು, ರೋಷಗಳೇ ಇಂದು ಕೋಲಾರದಲ್ಲಿ ದಲಿತ ಸಂಘರ್ಷ ಸಮಿತಿಯಲ್ಲಿ ಕಳೆದ ಎರಡು ಮೂರು ವರ್ಷಗಳಿಂದ 'ಕೇಡರ್' ಆಗಿ ದುಡಿಯಲು ಪ್ರೇರಕವಾಗಿದ್ದವು.

ಬೆಂಗಳೂರಿನ ಗಾಂಧಿನಗರದಲ್ಲಿ ಈತ ಅಪರೂಪಕ್ಕೆ ಭೆಟ್ಟಿಯಾದರೆ, "ನಿಮ್ಗೆ ದುಡ್ಡು ಕೊಡಬೇಕ್ರಿ, ಬೇರೆಯವರ್ಗೂ ಕೊಟ್ಟಿಲ್ಲ. ಸೊಡ್ರಿ ಚಿಪ್ಲಿ ಕಿತ್ತೋಗಿದೆ, ರಿಪೇರಿಗೆ ಕಾಸಿಲ್ಲ" ಎಂದು ಕತ್ತಲಾದೊಡನೆ 'ಮ್ಯಾಕ್ ಡೆವಲ್'ಗೆ ತಡಕಾಡುವ ಈತನ ಬುದ್ಧಿಗೆ ನಾನೇ ಸುಮ್ಮನಾಗಿದ್ದೇನೆ.

ದಲಿತ ನಿರ್ದೇಶಕನೆಂದು ಗಾಂಧಿನಗರದ ತುಂಬೆಲ್ಲಾ ಓಡಾಡುವ ಈ ಕುನ್ನಿಯ ಬಗ್ಗೆ ನನ ಜನರೂ ಹಾಗೂ 'ಪಂಚಮದ' ಓದುಗರ ಎಚ್ಚರವಹಿಸಬೇಕಾಗಿದೆ. ತನ್ನ ಬಣ್ಣ ಬಿಳಿಚಿ ತೆವಲುಗಳೆಲ್ಲಾ ತೇಲಿದಾಗಲೇ ಪಾಪ ಈತನಿಗೆ ತಾನೊಬ್ಬ ದಲಿತನೆಂದು ಅರಿವಾದದ್ದು.

—ಕೆ. ಮೂರ್ತಿ

### ದಲಿತರ ಮೇಲೆ ಹಲ್ಲೆ

(ಮೊದಲ ಪುಟದಿಂದ)

ದ್ದರು. ಆವೇಶ ಬಂದವರಂತೆ 'ನಾವಿನ್ ತಡಿಯಾಕಾಗಕಿಲ್ಲ, ಎಷ್ಟು ದಿವ್ಸಾಂತ ಹೀಗೆ ಬಗ್ಗದು. ಇವತ್ ನಾವು ಒಂದಾಗ್ಬುಟ್ಟಿವಿ ಅವ್ರಿರ್ಬೇಕ್ಕಿಲ್ಲಾ ನಾವಿರ್ಬೇಕು....' ಹೀಗೆ ಏನೇನೋ ಮಾತಾಡುತ್ತಿದ್ದರು.

ದೊಡ್ಡ ಕತ್ತಿ, ಚೈನು, ದೊಣ್ಣೆಗಳ ಹಿಡಿದುಕೊಂಡಿದ್ದ ಜನರು ಕತ್ತಲಾಗುತ್ತಿದ್ದಂತೆ, ಗುರ್ತಿಲ್ಲದೇ ತಮ್ಮ ತಮ್ಮಲ್ಲಿಯೇ ಹೊಡೆದಾಡಿ ಬಡಿದಾಡಿ ಪ್ರಾಣಗಳ ತೆರುವಂಥ ಸಾಧ್ಯತೆ ಇತ್ತು. ಇದ ಅರಿವು ಮಾಡಿಕೊಟ್ಟಾಗ ಗುಂಪಿನಲ್ಲಿ ಗೊಂದಲ ಕಡಿಮೆಯಾಯಿತು. ಹಾಗಿದ್ದು ಉದ್ರಿಕ್ತ ಗುಂಪು ದಲಿತ ಕೇರಿಯ ಕಡೆ ಹೋಗಲು ಪಟ್ಟು ಹಿಡಿದಾಗ, ರೈತ ನಾಯಕರು ತಡೆದರು, ಸಮಾಧಾನ ಹೇಳಿದರು. ಹೀಗಾದಾಗಿ ಅಲ್ಲಲ್ಲಿ ಚದುರಿದಂತೆ ಕಂಡರೂ ಮತು ರಾತ್ರಿ ಹೊತ್ತು ಹತ್ತಾರು ದಲಿತರ ಮೇಲೆರಗಿ ತಮ್ಮ ಆಕ್ರೋಶ ತೋರಿಸಿಕೊಂಡಿದ್ದಾರೆ.

ಮೇಲು ಜಾತಿಯವರು ಹೀಗೆ ಉದ್ರಿಕ್ತರಾಗಲು ಕಾರಣ ದಲಿತರ ಹುಡುಗರು ಮೇಲು ಜಾತಿಯ ಹುಡುಗಿಯರನ್ನು ಚುಡಾಯಿಸುತ್ತಾರೆ, ರಾಜಾರೋಷವಾಗಿ ದಲಿತರು ಎದೆ ಸೆಟೆದು ತಿರುಗುತ್ತಾರೆ. ಇದನ್ನೇ 'ಮಕ್ಳು ಮೆರೀತಾರೆ!' ಎಂದು ಇಲ್ಲಿನ ಜಾತಿ ಹಮ್ಮಿರುವ, ದುಡ್ಡಿನ ಮದ ತುಂಬಿ ಮನುಷ್ಯತ್ವವ ಛೀ! ಥೂ! ದೂರೀಕರಿಸಿರುವ ಪ್ಲಾಂಟರುಗಳು ಹೇಳುವುದು.

ದೇವಯ್ಯ ಹರವೆ

# ಜಾತಿವಿಷ ನುಂಗಿರುವ ಮುಸ್ಲಿಮರು

## ಅನುಭವದ ಗಣಿಯಿಂದ

"ಅನುಭವದ ಗಣಿಯಿಂದ" ಕಾಲಂನಲ್ಲಿ ಕಣ್ಣಾಡಿಸುವಾಗೆಲ್ಲಾ, ನನ್ನ ಅನುಭವಗಳು ಕಣ್ಣೆದುರುಗೆ ಬಂದು ನಿಲ್ಲುತ್ತವೆ. ಅಂತ ಸಾವಿರ ಅನುಭವಗಳ ರಾಶಿಯಿಂದ ಒಂದು ಘಟನೆಯನ್ನು ನಿಮ್ಮಮುಂದೆ ಇಡುತ್ತೇನೆ.

ಆಗ ತಾನೇ ಮೀನಾಕ್ಷಿಪುರಂನ ನನ್ನ ಬಂಧುಗಳು ಹಿಂದೂಗಳ ಹಿಂಸೆತಾಳದೆ ಮುಸ್ಲಿಂರಾಗಿದ್ದರು. 'ಪಂಚಮ' ಕೂಡ "ಮತಾಂತರದ ವಿಶೇಷ ಸಂಚಿಕೆ ತಂದಿತ್ತು. ಮೈಸೂರಿನದಲಿತ ವಿದ್ಯಾರ್ಥಿ ಒಕ್ಕೂಟ ನೆಡಸಿದ 'ಮತಾಂತರ ವಿಚಾರ ಸಂಕಿರಣ'ದ ಭಾಷಣಗಳು ನನ್ನ ಮನಸ್ಸಿನಲ್ಲಿ ಕೊರೆಯುತೊಡಗಿದ್ದವು. "ನಾವು ಹಿಂದೂಗಳಿಗೆ, ಹಿಂದೂ ಧರ್ಮಕ್ಕೆ ಸರಿಯಾದ ಬುದ್ಧಿ ಕಲಿಸಬೇಕಾದರೆ ಮುಸ್ಲಿಂ ಧರ್ಮಕ್ಕೆ ಮತಾಂತರವಾಗಬೇಕು" ಎಂದು ಹೇಳಿದ್ದ ಭಾಷಣಕಾರರಮಾತು, ಮುಸ್ಲಿಂ ಧರ್ಮದ ಬಗ್ಗೆ ಆಸಕ್ತಿ ಕೆರಳಿಸಿತ್ತು.

ಇದೇ ಸಂಧರ್ಭದಲ್ಲಿ, ರಜದಲ್ಲಿ ಗೆಳೆಯರೆಲ್ಲಾ ಊರಿಗೆ ಬಂದಿದ್ದೊ. ವಾಲಿಬಾಲ್‌ನಲ್ಲಿ ಒಳ್ಳೆ ಆಟಗಾರರಿದ್ದುದರಿಂದ ಅಂಬೇಡ್ಕರ್ ಯುವಕ ಸಂಘದ ವತಿಯಿಂದ ಪಕ್ಕದ ಹಳ್ಳಿಯ ಯುವಕ ಸಂಘದವರನ್ನು (ಒಕ್ಕಲಿಗರು) ವಾಲಿಬಾಲ್‌ನಲ್ಲಿ ಪಂದ್ಯಕ್ಕೆ ಆಹ್ವಾನಿಸಲಾಯಿತು.

ಹೈಸ್ಕೂಲ್ ಮೈದಾನದಲ್ಲಿ ಆಟ ಪ್ರಾರಂಭವಾಯಿತು. ಗೆಳೆಯರೆಲ್ಲರೂ ಬನಿಯನ್‌ಗಳ ಮೇಲೆ 'ಅಂಬೇಡ್ಕರ್ ಯುವಕ ಸಂಘ'' ಅಂತ ಪ್ರಿಂಟ್ ಹೊಡ್ಕಂಡಿದ್ದು ಅಲ್ಲಿ ನೆರದಿದ್ದ ಜನರ ಕಣ್ಣು ಕುಕ್ಕುತ್ತಿತ್ತು. ಗೆಳೆಯ ವೆಂಕಟಾಚಲನ ಚಾಣಾಕ್ಷ ಆಟ, ರಾಜುರವರ ರಿಸೀವಿಂಗ್, ಶಿವರಾಯನ ಪಾಸು ಆಹ್ವಾನಿತ ತಂಡವನ್ನು ಕಣ್ಣು ಬಾಯಿ ಬಿಡುವಂತೆ ಮಾಡಿತು.

ಅಲ್ಲಿ ನೆರದಿದ್ದ ಜನರಲ್ಲಿ ಕೆಲವರು, ತನ್ನೂರಿನ ಅಭಿಮಾನವನ್ನು ಬಿಟ್ಟು, ಜಾತಿಯ ಅಭಿಮಾನ ಉಳಿಸಿಕೊಳ್ಳುವ ಸಲುವಾಗಿ, "ಹೊಲೆರಿಂದಸೋತು ನಮಗೆಲ್ಲಾ ಅವಮಾನ ಮಾಡಬೇಡಿ. ಸರಿಯಾಗಿ ಆಡಿ'' ಅಂತ ಕೂಗುತ್ತಿದ್ದರು.

ಇದನ್ನು ಕೇಳಿ ಅಸಹ್ಯ ಪಡುತ್ತಿದ್ದ ನಮ್ಮ ಮನಸ್ಸಿನಲ್ಲಿ ಮುಸ್ಲಿಂ ಧರ್ಮದ ಬಗ್ಗೆ ಆಸೆ ಮೊಳಕೆಯೊಡೆಯುತೊಡಗಿತು.

ಮೊದಲ ಪಂದ್ಯ ಮುಗಿದು, ಆಟಗಾರರಿಗೆ ನೀರು ಕುಡಿಯಲು, ಇದ್ದನೀರು ಖರ್ಚಾಗಿದ್ದರಿಂದ ಹತ್ತಿರದಲ್ಲಿದ್ದ ಮುಸ್ಲಿಂ ಮನೆಯೊಂದರ ಬಾವಿಯಲ್ಲಿ ನೀರು ತರಲು ಓಡಿದೋ. ಇನ್ನೇನು ಹಗ್ಗ ಕಟ್ಟಿ ಬಕೆಟ್ ಬಾವಿಗೆ ಬಿಡಬೇಕು ಅನ್ನುವಷ್ಟರಲ್ಲಿ ಮನೆಯ ಯಜಮಾನ "ಹೇ ನಿಲ್ಲಿಸು, ನೀನು ಹೊಲೆರಸಿದ್ದನ ಮಗಅಲ್ಲವಾ, ಇಲ್ಲಿ ಗೌಡ್ರೆಲ್ಲಾ ನೀರು ತೆಗೆದುಕೊಳ್ಳುತ್ತಾರೆ. ಸ್ವಲ್ಪನೂ ಹಿಂದೂ ಮುಂದೂ ಯೋಚಿಸದೆ ನೀರು ಸೇದಕ್ಕೆ ಹೋಯಿತಿಯಲ್ಲಾ ಬೇಕಾದರೆ ಆಸ್ಪತ್ರೆ ಬಾವಿಗೆ ಹೋಗು'' ಅಂತ ಹೇಳುತ್ತಿದ್ದಂಗೆ, ನನ್ನ ಮನಸ್ಸಿನ ಹಿಂದೂ ಧರ್ಮದ ಕೆಸರಿನಲ್ಲಿ ಮೊಳಕೆಯೊಡೆದಿದ್ದ ಮುಸ್ಲಿಂ ಧರ್ಮ ಮುರುಟಿಹೋಯಿತು.

ಈ ಮತಾಂದರಿಂದ ರಕ್ಷಿಸಿಕೊಳ್ಳಲು ಮತಾಂತರದಿಂದಲ್ಲ, ಸಂಘಟನೆಯಿಂದ ಮಾತ್ರ ಸಾಧ್ಯವೆನ್ನುಸುತ್ತಿತು ಮನಸ್ಸಿನ ಮೂಲೆಯಲ್ಲಿ.

**–ಸತ್ಯಾನಂದ, ಸಿಂದುಘಟ್ಟ**

# 'ಮನು' ಕಲಿಸುತ್ತಿರುವ ಮೂಕ ಶಿಕ್ಷಣ!

ಜಾತೀಯ 'ಮನು' ವಿಷವೃಕ್ಷವು ಶಿಶುಗಳೂ ಸುಳ್ಳು ಹೇಳುವಂತ ವಾತಾವರಣವನ್ನು ನಿರ್ಮಿಸಿದೆ. ತೊದಲು ಮಾತಿನ, ಅಂಬೆಗಾಲಿಡುವ ಮಗೂ ಸಹ 'ನಿಜ' ನುಂಗಿ ಜೀವಿಸಬೇಕಾಗಿದೆ.

ಒಂದು ಗ್ರಾಮದಲ್ಲಿನ ಸರ್ಕಾರಿ ಶಿಶುವಿಹಾರದ ಅಟೆಂಡರ್‌ಳನ್ನು ಬೇಟಿ ಮಾಡಿ ಮಾತಾನಾಡಿದ್ದನ್ನು ಇಲ್ಲಿ ತೆರೆದಿಡುತ್ತಿದ್ದೇನೆ.

ಹಲವಾರು ಜನಾಂಗಗಳನ್ನು ತನ್ನ ಮಡಿಲಲ್ಲಿ ತುಂಬಿ ಕೊಂಡಿರುವ ಈ ಗ್ರಾಮ ಅಷ್ಟೇನು ನಾಗರೀಕವಾಗಿಲ್ಲ. ಜಾತೀಯ ವಿಷಮಧ್ಯವನ್ನು ಕಂಠಪೂರ್ತಿ ಕುಡಿದು ಈ ಗ್ರಾಮದ ಸವರ್ಣಿಯರ ತಮ್ಮ ಮಕ್ಕಳನ್ನು ಶಿಶುವಿಹಾರಕ್ಕೆ ಕಳಿಸುವುದಿಲ್ಲ. ಅಡಿಗೆಯವಳು 'ಮಾದಿಗ' ಜನಾಂಗದವಳು ಎಂಬ ಒಂದೇ ಕಾರಣದಿಂದ ಸರ್ಕಾರದ ಸೌಲಭ್ಯವನ್ನು ಕಾಲಿನಿಂದ ತಳ್ಳಿದ್ದಾರೆ. ಇಲ್ಲಿನ ಹೊಲೆ–ಮಾದಿಗರು ತುಂಬಾ ಅನಾಗರಿಕ ಸ್ಥಿತಿಯಲ್ಲಿದ್ದಾರೆ. ತಮ್ಮ ಮತ್ತು ಮಕ್ಕಳ ಭವಿಷ್ಯದ ಬಗ್ಗೆ ಕಿಂಚಿತ್ತೂ ಯೋಚಿಸುವುದಿಲ್ಲ.

ಬೇರೆ ಜಾತಿಯವರಲ್ಲಿ ತುಂಬಾ ಬಡವರೂ ನಿರ್ಗತಿಕರೂ ಇದ್ದಾರೆ. ಇವರಿಗೆ "ನಿಮ್ಮ ಮಕ್ಕಳನ್ನು ಶಿಶುವಿಹಾರಕ್ಕೆ ಕಳಿಸಿ. ಜಾತೀಯತೆಯನ್ನು ಬಿಟ್ಟು ಸರ್ಕಾರದಿಂದ ಬರುವ ಸೌಲಭವನ್ನು ಉಪಯೋಗಿಸಿಕೊಳ್ಳಿ" ಎಂದು ಹೇಳಿದರೆ, 'ಅದೆಲ್ಲ ಹ್ಯಂಗಾಗ್ತದೆ ಬಿಡಿ. ಮೇಲೆ ಹರಿಯೋ ನೀರು ಮೇಲೆ ಹರೀಬೇಕು. ಕೆಳಗೆ ಹರಿಯೋ ನೀರು ಕೆಳಗೇ ಹರೀಬೇಕು. ಅಲ್ಲಿ ಮಾದಿಗರೋಳು ಅಡಿಗೆ ಮಾಡ್ತಾಳೆ. ಅದ್ಕೆ ನಮ್ಮ ಮಕ್ಕಳನ್ನು ಕಳಿಸಲ್ಲ. ಬೇಕಾದರೆ ಉಪಾಸ ಸಾಯ್ತಿವಿ. ಈ ಶಿಶುವಿಹಾರನೇ ಇತ್ತ ನಮಗೆ" ಎಂದು ಕಡ್ಡಿ ಮುರಿದಂತೆ ಉತ್ತರಿಸುತ್ತಾರೆ.

ಒಂದು ಹೊಲೆಯರ ಮಗು ಬಿಟ್ಟು ಉಳಿದೆಲ್ಲವು ಮಾದಿಗರ ಮಕ್ಕಳು. ಅಟೆಂಡರ್ 'ಹರಿಜನ'ದವಳಾದ್ದರಿಂದ ತಮ್ಮ ಜನರ ಮನೆ ಹತ್ತಿರ ಹೋಗಿ, ಬರದೇ ಇದ್ದ ಮಕ್ಕಳನ್ನು ಬಲವಂತವಾಗಿ ಕರೆ ತರುತ್ತಾಳೆ. ತಂದೆ–ತಾಯಿಗಳಿಗೆ ತಿಳುವಳಿಕೆ ಹೇಳುತ್ತಾಳೆ. ಹರುಕು ಬಟ್ಟೆಯ, ಎಣ್ಣೆಕಾಣದ ಕೂದಲಿನ ಮಕ್ಕಳ ಸ್ವಚ್ಛತೆ ಬಗ್ಗೆ ಕಾಳಜಿ ವಹಿಸುತ್ತಾಳೆ. ಇವಳು ಮಕ್ಕಳಿಗೆ 'ಗುಮ್ಮ' ಇದ್ದಂತೆ. ಸರ್ಕಾರಿ ಅಧಿಕಾರಿಗಳು ತನಿಖೆಗೆ ಬಂದಾಗ ಮೇಡಂ ಮೊದಲೇ ಹೇಳಿಕೊಟ್ಟ 'ರೆಡಿಮೇಡ್' ಉತ್ತರವನ್ನೇ ಹೇಳಬೇಕು!

ಮೇಡಂ ಹುಡುಗರನ್ನು "ನಿಮ್ಮ ಮನೇಲಿ ಸಾರು ಏನು?" ಎಂದು ಕೇಳಿದರೆ, 'ಕ್ವಾಣನ ಬಾಡ್ನೆಸ್ರು', 'ನಮ್ಮನೇಲೂ ಬಾಡ್ನೆಸ್ರು' ಎಂದು ಎದ್ದು ಕೈಕಟ್ಟಿ ನಿಂತ ಮಕ್ಕಳು ಹುರುಳಿ ಉರಿದಂತೆ ಸಹಜವಾಗಿ ಉತ್ತರಿಸುತ್ತಿದ್ದರು. ಇದನ್ನು ಕೇಳಿ ಗಹಗಹಿಸಿ ನಕ್ಕ ಮೇಡಂನನ್ನು ಮತ್ತು ನಿಜ ನುಡಿದ ಮಕ್ಕಳನ್ನು ನುಂಗುವಂತೆ ನೋಡುತ್ತ ನಿಂತ ಅಟೆಂಡರ್ ತನ್ನ ಕೋಪವನ್ನು ನುಂಗಿ ಕೊಂಡು ಮೇಡಂ ಬಾಗಿಲಾಚೆ ಕಾಲಿಡುವುದನ್ನೇ ಕಾಯುತ್ತಿದ್ದಳು. ನಂತರ ದುರ್ಗಿಯಂತೆ ಬೆತ್ತದಿಂದ ಮಕ್ಕಳನ್ನು ಚೆನ್ನಾಗಿ ಬಾರಿಸಿ, "ಎಷ್ಟೋ ದಿನ ನಿಮಗೆ ಹೇಳಿಕೊಡೋದು. 'ಬಾಡ್ನೆಸ್ರು' ಅಂತ ಹೇಳಬೇಡಿ. 'ಮಾಂಸದ ಸಾರು' ಅಂತ ಹೇಳಿ, ಬೇಳೆ ಸಾರು ಅನ್ರಿ. ಬೇರೆ ಬೇರೆ ಹೆಸರು ಹೇಳ್ರಿ, ಎಲ್ಲಾ ಒಂದೇ ಸಾರು ಹೇಳಬ್ಯಾಡ್ರಿ. ಕ್ವಾಣನ ಬಾಡ್ನೆಸ್ರು, ದನಿನ ಬಾಡ್ನೆಸ್ರು ಅಂತ ಇನ್ನೊಂದು ದಿನ ಹೇಳಿದ್ರೆ ಕಾಲು ಮುರಿತೀನಿ" ಎಂದು ಪಾಠ ಹೇಳಿಮುಗಿಸಿ ಅಸಮಾಧಾನದಿಂದ ವ್ಯಾನಿಟಿ ಬ್ಯಾಗ್ ಹೆಗಲೇರಿಸಿಕೊಂಡು ಹೊರಬಂದಾಗ, ಕಣ್ಣು ಮಿಟುಕಿಸದೆ ಅವಳನ್ನೇ ನೋಡುತ್ತಿದ್ದ ಮಕ್ಕಳು ಮಾತು ಮರೆತಂತಾದವು.

**— 'ರತ್ನ' ತುಮಕೂರು**

# ಈಗ ಬಿಡುಗಡೆಯಾಗಿದೆ

## ಲೇಖನಗಳು ಮತ್ತು ಮುನ್ನುಡಿಗಳು

ಲೇಖಕ : **ಗೋಪಾಲಕೃಷ್ಣ ಅಡಿಗ**

1978 ರಲ್ಲಿ ತಮ್ಮ 'ಸಮಗ್ರ ಗದ್ಯ' ಪ್ರಕಟವಾದ ಬಳಿಕ ಅಡಿಗರು ಇಂದಿನ ರಾಜಕೀಯ, ಸಾಮಾಜಿಕ ಪರಿಸ್ಥಿತಿ, ಶಿಕ್ಷಣ, ಸಾಹಿತ್ಯಿಕ ಸಂದರ್ಭ ಮೊದಲಾದ ವಿಷಯಗಳ ಬಗ್ಗೆ ಬರೆದ ಲೇಖನಗಳು ಇದರಲ್ಲಿವೆ. ಜೊತೆಗೆ ಅನಂತಮೂರ್ತಿ, ಲಂಕೇಶ್, ಚಂದ್ರಶೇಖರ ಕಂಬಾರ, ದಿವಂಗತ ಯರ್ಮುಂಜರಾಮಚಂದ್ರ ಮೊದಲಾದ ಲೇಖಕರ ಬಗ್ಗೆ, ಆಯಾ ಲೇಖಕರ ಲೇಖಕ-ಜೀವನದ ಮೊದಲಲ್ಲಿ ಬರೆದ ಬರಹಗಳನ್ನೂ ಈ ಸಂಗ್ರಹ ಒಳಗೊಂಡಿದೆ.

**ಬೆಲೆ : ರೂಪಾಯಿ ಹದಿನೈದು**

## ದುಡಿಯುವವರ ದನಿ ಮತ್ತು ಇತರ ಲೇಖನಗಳು

ಲೇಖಕ : **ಎಸ್. ವೆಂಕಟರಾಂ**

ದಿವಂಗತ ಎಸ್. ವೆಂಕಟರಾಂ ದೊಡ್ಡ ಮಟ್ಟದ ಕಾರ್ಮಿಕ ನಾಯಕರಾಗಿದ್ದಂತೆ ನುರಿತ ಬರಹಗಾರರೂ ಆಗಿದ್ದರು. ಕನ್ನಡದ ಕೆಲವು ಸಾಹಿತ್ಯ ಕೃತಿಗಳು, ಡಾಸ್ಟವಸ್ಕಿ ನಮ್ಮ ಪಠ್ಯ ಪುಸ್ತಕಗಳು, ಭೂರುಧಾರಣೆ ಮೊದಲಾದ ವಿಷಯಗಳ ಬಗ್ಗೆ ಅವರು ಬರೆದ ಲೇಖನಗಳು ಈ ಸಂಗ್ರಹದಲ್ಲಿವೆ. ನಮ್ಮ ಯೋಚನಾ ಕ್ರಮಕ್ಕೆ ಹೊಸ ತಿರುವು ಕೊಡಬಲ್ಲ ಲೇಖನಗಳು ಇವು.

**ಬೆಲೆ : ರೂಪಾಯಿ ಹದಿನಾರು**

## ಕೋತಿಯ ಆಸೆ

### ಮಕ್ಕಳ ಕತೆಗಳು

ಮಕ್ಕಳಿಗಾಗಿ ರಚಿತವಾದ ಈ ಪ್ರಾಣಿ ಕಥೆಗಳನ್ನು ವಿವಿಧ ಲೇಖಕರು ಬರೆದಿದ್ದಾರೆ. ಸುಮಾರು ಅರವತ್ತು ಪುಟಗಳು, ಗುಜ್ಜಾರಪ್ಪ ಬರೆದ ಸುಂದರ ಚಿತ್ರಗಳನ್ನೊಳಗೊಂಡ ಈ ಪುಸ್ತಕದಲ್ಲಿ ಒಟ್ಟು ಹನ್ನೆರಡು ಕತೆಗಳಿವೆ.

**ಬೆಲೆ : ರೂಪಾಯಿ ಎರಡು**



**ಪ್ರಿಂಟರ್ಸ್ ಪ್ರಕಾಶನ**
75, ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು-560001

# ಸವರ್ಣೀಯ ಬಾಯಲ್ಲಿ ಜಾತಿಹುಳ

ಒಮ್ಮೆ ಮೈಸೂರು ಮಾನಸ ಗಂಗೋತ್ರಿಯಲ್ಲಿರುವ ಸ್ನಾತಕೋತ್ತರ ಪದವಿಯ ಹಾಸ್ಟೇಲಿನಲ್ಲಿ ಎಂ.ಎ. ಓದುತ್ತಿರುವ ವಿದ್ಯಾರ್ಥಿಗಳ ಬಾಯಿಂದ ಜಾತಿಯ ಹುಳ ಹೊರ ಹೊರಟಾಗ ನಾನು ಬಾತ್ ರೂಂನಲ್ಲಿ ಸ್ನಾನ ಮಾಡುತ್ತಿದ್ದೆ. ಈ ಜಾತಿಯ ಹುಳುವನ್ನು ಬಾಯಲ್ಲಿಟ್ಟುಕೊಂಡ ಸವರ್ಣೀಯ ವಿದ್ಯಾರ್ಥಿಗಳು ಇಲ್ಲಿಯ ದಲಿತ ವಿದ್ಯಾರ್ಥಿಗಳ ಎದುರುಗಡೆ ಉಗುಳಲಾರದೆ ಹೊಟ್ಟೆಯೊಳಕ್ಕೆ ನುಂಗುತ್ತಾ, ಬಾತ್‌ರೂಂ, ಲ್ಯಾವಟ್ರೆನ್ ಅಥವಾ ತಮ್ಮ ರೂಂನಲ್ಲಿಯೇ ವಾಂತಿ ಮಾಡಿಕೊಳ್ಳುತ್ತಿರುತ್ತಾರೆ.

ಅಂದು ನಾನು ಸ್ನಾನ ಮಾಡುವಾಗ ಬಾತ್ ರೂಂಗೆ ಮುಖ ತೊಳೆಯಲು ಬಂದ ಇಬ್ಬರು ವಿದ್ಯಾರ್ಥಿಗಳು ಜಾತಿಯ ಹುಳುವನ್ನು ವಾಂತಿ ಮಾಡುವ ಸದ್ದು ಕೇಳಿಸಿತು :

ಒಬ್ಬ : ಅಲ್ಲರೀ ನಮ್ಮ ಹಾಸ್ಟೇಲಿನಲ್ಲಿ ಯಾಕೆ ಈ ರೀತಿ ಸ್ನಾನದ ನೀರಿಗೂ ಬರ ಬಂತಲ್ಲಾ ಅಂತ.

ಇನ್ನೊಬ್ಬ : ಬರಬಾರದೇ ಇನ್ನೇನ್ರಿ, ಹೊಲೆಮಾದಿಗರೆಲ್ಲಾ ದಿನಾ ಸ್ನಾನ ಮಾಡ್ಲಿಕ್ಕೆ ಶುರು ಮಾಡಿದ್ದಾರೆ ನೀರು ತಾನೇ ಎಲ್ಲಿ ಸಿಗಬೇಕು ಹೇಳಿ.

ಒಬ್ಬ : ಶ್ಯ…….. ಜೋರಾಗಿ ಹೇಳ್ಬೇಡಿ ಪಕ್ಕದಲ್ಲೇ ರೂಂಗಳಿದ್ದಾವೆ. ಎಲ್ಲಾದ್ರೂ ಕೇಳಿಸ್ಕಂಡ್ರೆ, ಬೆಂಡ್ ಎತ್ತಕ್ಕೆ ಬರ್ತಾರೆ.

ಇನ್ನೊಬ್ಬ : ಛೆ, ಯಾಕ್ರಿ ಅಷ್ಟೊಂದು ಹೆದರ್ಕೋತೀರಿ…….. ಅವರ್‍ಯಾರು ಈಗ ರೂಂನಲ್ಲಿ ಇರೊಲ್ಲ, ಎಲ್ಲಾ ಅಚ್ಚುಕಟ್ಟಾಗಿ ಸ್ನಾನ ಮಾಡಿ ಡೈನಿಂಗ್‌ಹಾಲ್ ಸೇರಿದ್ದಾರೆ.

ಒಬ್ಬ : ಹೌದಲ್ವ ನಮ್ಮಲ್ಲಿ ದಿನಾ ಸ್ನಾನ ಮಾಡಿ ಆಹಾರ ತೆಗೆದುಕೊಳ್ಳಬೇಕು ಅಂತಿದೆ, ಆದ್ರೆ ಈಗಿದು ನಂಬಿಕೊಂಡು ಊಟ ಮಾಡೋವಷ್ಟು ಹೊತ್ತಿಗೆ ನಾವ್ ಸತ್ತು ಹೋಗಿರ್ತೀವಿ. ಬ್ರಾಹ್ಮಣಂ ಬೋಜನ ಪ್ರಿಯಂ ಎಂಬುದನ್ನು ಬದಲಾಯಿಸಿ ಶುದ್ರಂ ಬೋಜನ ಪ್ರಿಯಂ ಅಂತ ಮಾಡಬೇಕು.

ಇನ್ನೊಬ್ಬ : ಅಲ್ಲಾರೀ ಹೋದ ವರ್ಷ ಡಿಗ್ರಿಯಲ್ಲಿರಬೇಕಾದ್ರೆ ಅಲ್ಲಿಯ ಈ ಸೆಡ್ಯೂಲ್ಡ್‌ಕ್ಯಾಸ್ಟ್ ಹುಡುಗರು ಜಾತಿ ಮುಚ್ಚಿಟ್ಟಕೊಂಡು ನಮ್ಮ ಜೊತೆಬೆರಿತಾ ಇದ್ರು, ಅಲ್ಲಾ……..ನಾವ್ರ ಅವರನ್ನ ಎಲ್ಲೆಲ್ಲಿ ದೂರ ಇಡ್ಬೇಕೋ ಅಲ್ಲಲ್ಲೆ ಇಡ್ತಾ ಇದ್ವಿ, ಮುಂಚೆ ಗೊತ್ತಾಗ್ತನೆ ಇರ್‍ಲಿಲ್ಲಾ. ಇಲ್ಲಿ ಹುಡುಗರಂತೂ "ಇಕ್ಕರಲಾ, ವದಿರ್‍ಲಾ", "ಹೊಲೆಯರು ಅಂತೀರಿ ಮಾದಿಗರು ಅಂತೀರಿ ನಿಮ್ಮ ರಕ್ತ ಹೆಂಗಿರುವುದೋ ಓ ಜನರೇ ನಮ್ಮ ರಕ್ತ ಕೆಂಪಿರುವುದೋ" ಅಂತ ಏನೇನೋ ತುಂಬಾ ಹಾಡ್ ಹೇಳ್ಕೊಂಡು ಇರ್ತಾರೆ ಯಾವಾಗ್ಲೂ.

ಒಬ್ಬ : ಅಲ್ಲರೀ ನೀವು ಅವರ ಬಗ್ಗೆ ಇಷ್ಟು ಮಾತಾಡೋವರು ಯಾಕೆ ಅವರ ಜೊತೆಗೆ ಹೊಟ್ಟಾಗಿ ಇರ್ತೀರಿ.ಅವರು ಹಾಡುವಾಗ ನೀವೂ ತಾಳ ಹಾಕ್ತೀರಿ, ಧ್ವನಿ ಸೇರಿಸ್ತೀರಿ.

ಇನ್ನೊಬ್ಬ : ಛೆ ! ಬಹಳ ದಡ್ಡರ್‍ರೀ ನೀವೂ, ಹಾಗೆ ಇಲ್ದೆ ಇದ್ರೆ ಇವತ್ತಿನ ಕಾಲದಲ್ಲಿ ಅವರೇ ನಮ್ಮನ್ನ ದೂರ ಇಡ್ತಾರೆ, ಹಾಗೂ ತುಳಿದು ಬಿಡ್ತಾರೆ ಸೂಳೆಮಕ್ಕಳು.

—ಜಿ. ಸಿ. ಶೇಖರ್

## ಮರಣಮಂಡಲ ಮಧ್ಯದೊಳಗೆ

ಮೂಲೆಯಲ್ಲಿ ಕುಳಿತ ಓ ಗೆಳೆಯ ಅಲ್ಲೇನು ನೋಡುವೆ
ನನ್ನ ಗೆಳೆಯ ನೀ ಅಲ್ಲೇನು ನೋಡುವೆ ನನ್ನ ಗೆಳೆಯ.

ಆಯ್ಯ ಗೆಳೆಯ ಇಲ್ಲಿ ಕೇಳು, ಸುಂದರವಾದ ಸಮುದ್ರ, ಮತ್ತು ಬೆಟ್ಟಗುಡ್ಡಗಳಿಂದ ಆವೃತ್ತವಾದ 'ಭಾರತ ದೇಶ' ಎಂಬ ನಾಡೊಂದು ಉಂಟು. ಅಲ್ಲಿ ಬಡ್ಡಿ ಎಂಬುದೊಂದು ರಾಜ್ಯ. ಅಲ್ಲಿ ನಾಡಿಗೆ ನಾಡಿಯಾಗಿ ಬಡಿಯುತ್ತಿರುವ 'ಸಾಲೂರು' ಎಂಬುದೊಂದು ಊರು. ಈ ಊರ ಶ್ರೀಮಂತರೆಬಡವರ ಸಹಾಯಾರ್ಥವಾಗಿ ಜೀವ ತೇದಿದ್ದಾನೆ. ಹೇಗೆಂದವ :

ಮರಣ ಮಂಡಲ ಮದ್ಯದೊಳಗೆ
ಮೆರೆವ ಎಲುಬಿನ ಕೋಟೆಯೊಳಗೆ
ಉರಿವ ಬಿಸಿಲಿನ ನೇರಕೆಳಗೆ
ದುಡಿದು ನಿಂತನು ಬಡವನು
ಅನ್ನವಿಲ್ಲದೆ ಗಾಳಿ ಕುಡಿದು
ದಣಿದು ಬಳಲಿ ನಿಂತ ಬಡವನು
ಆಗ ದಣಿಯು ಬಂದು ನೋಡಿ
ಅವನು ನಿಂತ ಪರಿಯನು
ದಣಿಯು ಬಂದು ಮೈಯ ಸವರಿ
ಆಯ್ಯ ನೀನು ಸಾಯಲೇಕೊ
ಸತ್ತು ನಮ್ಮನು ಅಳಿಸಲೇಕೊ

ನೀನು ಸತ್ತರೆ ನಮ್ಮ ಭೂಮಿಯು ಬಂಜರಾಗಿ ಉಳಿರುವುದು. ಎಂದು ಸಂತೈಷಿಸಿ ಮನೆಗೆ ಕರೆದುಕೊಂಡು ಹೋಗಿ ಚಕ್ರ ಬಡ್ಡಿಯನ್ನು ಕೊಡಿಸಿದ, ಆಹಃ ಎಂಥ ಪುರುಷ ! ಹೊಟ್ಟೆಗಿಲ್ಲದವನಿಗೆ ಅನ್ನಕೊಟ್ಟ ದಣಿ. ಉಸಿರಿಲ್ಲದವನಿಗೆ ಉಸಿರುಕೊಟ್ಟ ದಣಿ. ಅವನು ತನ್ನ ಹಣವನ್ನು ಇನ್ನೊಬ್ಬರಿಗೆ ಯಾಕೆ ಕೊಡಬೇಕು ? ಆದರೂ ಕೊಟ್ಟ. ತಾನೆ ದುಡಿದರೆ ಬೇರೆಯವರಿಗೆ, ಬಡವರಿಗೆ ಕೆಲ್ಸ ಇರದೆ ಹೋಗ್ತದೆ ಅಂತ, ತಾನು ಕೆಲಸ ಮಾಡದೆ ಬೊಜ್ಜು ಬೆಳಸಿ ಉಳಿದವರಿಗೆ ಕೆಲಸ ಕೊಟ್ಟ ಮಹಾನುಭಾವ.

ಅಹಃ ಎಂಥವನೆಂಥಾವನು (ನಮ್ಮ ದಣಿಯು)
ಬಡವ ನೀ ಬಾರೆಂದು
ಏಕಾಂತ ಕರೆದೋಯ್ದು
ಎಂಥಾ ಮಾತೇಳೋದನು, ನಮ್ಮ ದಣಿಯು
ಎಂಥಾವನೆಂಥಾವನು, ನಮ್ಮ ದಣಿಯು

ಬಡ ಮಕ್ಕಳೆ ನನ್ನನ್ನು ಮೇಲೆ ತಂದೋರು ನೀವು. ಸಿರಿತನಕೊಟ್ಟೋರು ನೀವು. ನನ್ನ ಹಣ ನಿಮ್ಮದೆ, ಸುಮ್ಮನೆ

### ಮುಳ್ಳೂರು ನಾಗರಾಜ

ನಿಮ್ಮತ್ರ ಹಣ ಇದ್ರೆ ಕೊಬ್ಬೋಯ್ತಿರಲ್ಲ ಅಂತ ನಾನೆ ಇಟ್ಕೊಂಡೆ. ಸುಮ್ನೆ ನಿಮ್ಮ ತಲೆಗೆ ಯಾಕೆ ಕೆಲಸ ಕೊಡಬೇಕಂತ ನಾನೇ ಎಲ್ಲ ಜವಾಬ್ದಾರಿ ಹೊತ್ಕೊಂಡೆ. ಈಗ ನಮ್ಮ ರಾಜ್ಯಕ್ಕೆ ನಾನೇ ದೇವರು.

ಮಕ್ಕಳೇ ನಿಮಗೆ ಉಣ್ಣೊಕಷ್ಟ ಯಾಕೆ ಅಂತ ನಾನೇ ಉಂಡೆ. ನಿಮಗೆ ಉಸಿರಾಡೊ ಕಷ್ಟ ಯಾಕೆ ಅಂತ ನಾನೇ ಉಸಿರಾಡಿದೆ. ನಿಮಗೆ ಮಕ್ಕಳು ಹುಟ್ಟಿಸುವ ಕಷ್ಟಯಾಕೆ ಅಂತ ನಾನೇ ಹುಟ್ಟಿಸಿದೆ.

ಈಚೆ ಕಡೆ ಈ ಬಡವ ತಂದ ಸಾಲದಲ್ಲಿ ಹೆಂಡತಿ ಕಾಯಿಲೆ ಮಗನ ಹಸಿವು ತೀರಸ್ದೆ. ಹೊಲಕ್ಕೆ ಗೊಬ್ಬರ ಎತ್ತಿಗೆ ಹುಲ್ಲು ತಂದಾ ಕೊತ್ತಿಗೆ ದುಡ್ಡು ಉಳಿಯಲೇ ಇಲ್ಲ.

ಈ ಕಡೆ ದುಡಿಯದೆ ಮರವಾದ ನಮ್ಮ ರೈತರಿಗೆ ಸಾಲ ಕೊಟ್ಟು ಉಪಕಾರ ಮಾಡಿದ ಧಣಿಗಳು ಇಡೀ ಊರ ಜೀವ ಕೆಲ್ಲ ತನ್ನ ಬೇರು ಬಿಟ್ಟು ಬೆಳೆದರು. ಇನ್ನೂ ಬಡವ ಸಾಲಕೊಟ್ಟಿಲ್ಲ ಚಕ್ರ ಬಡ್ಡಿ ತಂದೊಪ್ಸಿಲ್ಲ. ಅಂತ ಅವ್ನ ದೂತರನ್ನು ಅಟ್ಟಿದ. ಅವರು ಹೋಗಿ ಬಡವನನ್ನು ಚಂಡಿನಂತೆ ಚಂಡಾಡಿದ್ರು. ಅಪ್ಪ ನಿಮ್ ದಮ್ಮಯ್ಯ ನಿಮ್ ಕಾಲ್ ಕಟ್ಕೋತೀನಿ ಅಂದ. ಆ ಮಾತು ಕೇಳವ್ರ್ಯಾರು, ಮನೆಮಟ್ಟ ಹಾಕಿದ್ರು ಬಡವನನ್ನು ಒದ್ದು ಕೆಡಗ್ಯದ್ರು, ಆ ಮೇಲೆ—

#### ಒಂದು ವಿನೂತನ ಹರಿಕಥೆ

ಈ ದೂತರು ಬಂದಾರೊ (ನಮ್ಮ ದಣಿಯ)
ಬಂದು ನಿಂತು ಸತಿಮಣಿ
ಕೆಂಜಡೆ ಎಳೆದಾರೊ
ಅವಳ ಸೀರೆ ಎಳೆದಾರೊ
ಅವಳ ಮಾನ ಕಳೆದಾರೊ

ಕತೆ ಇಷ್ಟಕ್ಕೆ ಮುಗಿಯಲಿಲ್ಲಡಿ.

ಬದುಕು ಒಂದು ಜಟಕಾ ಬಂವಿಧಿಯು ಅದರ ಸಾಹೇಬ
ಕುದುರೆ ನೀನ್ ಮದುವೆಗೊ, ಮಸಣಕ್ಕೊ
ಓಡೆಂದ ಕಡೆಗೋಡೆಂದ ಮಂಕುತಿಮ್ಮ.

ಭಾರತ ದೇಶ ಬಡರೈತ ಎತ್ತು, ಕಳಕೊಂಡ, ಹೆಂಡ್ತಿ ಕಳಕೊಂಡ. ಚಕ್ಕಳದ ಗೊಂಬೆಯಂಥ ಶರೀರದಲ್ಲಿಜೀವ ಮಾತ್ರ ಉಳಿಸಿಕೊಂಡ. ಇಂಥ ಲಕ್ಷಾಂತರ ಜನರು ಕೋಟ್ಯಾಂತರಜನರು ಪುನಃ ಮತ ಹೆಂಡ್ತಿ ಮಕ್ಕಳು ಕಳಕೊಂಡವ್ರು, ಕಷ್ಟ ಪಟ್ಟು ದುಡಿಯವ್ರು ಎಲಾ ಒಂದು ಕಡೆ ಸೇರಿದ್ರು. ಒಗ್ಗಟ್ಟಿನಲ್ಲಿ ಬಲ ಇದೆ ಅಂದ್ರು. ಧಣಿಗಳ ಧನ ಮದ ಅಡಗಿಸ್ತೀವೆ. ಅವರ ಕೊನೆಗಾಣಿಸ್ತಿವಿ ಅಂದ್ರು

# ತುಮಕೂರು ಜಿಲ್ಲೆ ಒಂದು ತಿಂಗಳಲ್ಲಿ ಕಂಡ ಪೋಲೀಸ್ ದೌರ್ಜನ್ಯ, ಅಸ್ಪೃಶ್ಯತೆ, ಜಾತಿದಳ್ಳುರಿ, ಕೊಲೆಗಳ ಸರಮಾಲೆ!

ನರಸಿಂಹಯ್ಯ
ನರಸಿಂಹರಾಜು

ಈ ದೇಶದಲ್ಲಿ ದಿನ ನಿತ್ಯ ಬಿಡುವಿಲ್ಲದೆ ದಲಿತರ ಮೇಲೆ ನಡೆಯುವ ದೌರ್ಜನ್ಯಗಳು ಅಸ್ಪೃಶ್ಯತೆ ಕಟ್ಟುನಿಟ್ಟಿನ ಆಚರಣೆ, ಮುಗಿಲೆತ್ತರಕ್ಕೂ ಚಾಚಿರುವ ಜಾತಿ ದಳ್ಳುರಿಗಳು, ಕೊಲೆಗಳು ಹಲ್ಲೆಗಳು ಒಂದು ಸರಮಾಲೆ. ಇದರಲ್ಲಿ ಬೆಳಕಿಗೆ ಬಾರದೆ ಮುಚ್ಚಿಹೋಗುವವುಗಳ ಸಂಖ್ಯೆಯೇ ಅಧಿಕ. ಅಲ್ಲೊಂದು ಇಲ್ಲೊಂದು ಬೆಳಕಿಗೆ ಬಂದರೂ ಜಾತಿವಾದಿ ಪತ್ರಿಕೆಗಳಲ್ಲಿ ಅಚ್ಚು ಮೊಳೆಗಳನ್ನು ಕಾಣದೆ ವಂಚಿತವಾಗಿ ಈ ದೇಶದ ಕಪ್ಪು ಚರಿತ್ರೆಯಲ್ಲಿ ಸೇರುತ್ತವೆ. ತುಮಕೂರು ಜಿಲ್ಲೆಯಲ್ಲಿ ಒಂದು ತಿಂಗಳಲ್ಲಿ ಕಣ್ಣಿಗೆ ಕಂಡ ಪ್ರಕರಣಗಳನ್ನು ಇಲ್ಲಿ ಕಾಣಬಹುದು.

## ಪೋಲೀಸರು ಹಾಕಿಸಿದ ನೇಣು

ಕೋಲಾರದಲ್ಲಿ ದಲಿತ ವಿದ್ಯಾರ್ಥಿ ಒಕ್ಕೂಟದ ಸಮ್ಮೇಳನ ನಡೆದಿದ್ದಾಗ ಸುದ್ದಿ ಓದಿದ್ದ ಕಾತರ. ಬಂದ ತಕ್ಷಣ ತುಮಕೂರಿನ ಲೇಬರ್ ಕಾಲೋನಿಗೆ ಹೋದೆವು. ಒಬ್ಬ ಮನುಷ್ಯ ಅಡ್ಡ ಮಲಗಲೂ ಆಗದಂತಹ ಗಲ್ಲಿಗಳು. ಗಿಜಿಗುಟ್ಟುವ ಜನ, ಮಕ್ಕಳ ಓಡಾಟದ ಮಧ್ಯೆ ನುಸುಳಿ ರಾಜೇಂದ್ರನ್ ಮನೆ ಬಳಿ ಬಂದೆವು. ರಾಜೇಂದ್ರನ್ ಮನೆ ತೋರಿಸಿದ ಹೆಂಗಸೊಬ್ಬಳು "ಪೋಲೀಸರಿಗೂ ಹೆಂಡತಿಯರು ಮಕ್ಕಳು ಇರುತ್ತಾರೆ. ನಮ್ಮ ಸಂಕಟ ನೋವು ಅವರಿಗೂ ಒಂದು ದಿನ ತಟ್ಟುತ್ತೆ" ಎನ್ನುತ್ತಾ ನೆಟಿಕೆ ಮುರಿಯುತ್ತಿದ್ದಳು. ರಾಜೇಂದ್ರನ್ ಪತ್ನಿ ಪುಷ್ಪ (25) ಪತಿಯ ಸಾವಿನ ಆಘಾತದಿಂದ ಚೇತರಿಸಿಕೊಂಡಿರಲಿಲ್ಲ. ಮಾತನಾಡಲೂ ಆಗದಂತಿದ್ದ ಆಕೆಯ ಬಳಿ ವಸು (1 ವರ್ಷ), ಸುಂದರ್ (4) ಆಕೆಯ ಹೊಣೆಗಾರಿಕೆಯನ್ನು ಹೆಚ್ಚಿಸಿದ್ದರು. ಪತಿಯ ಬಂಧನದ ಸುದ್ದಿ ತಿಳಿದು (ಫೆಬ್ರವರಿ 3) ಟೌನ್ ಸ್ಟೇಷನ್‌ಗೆ ಓಡಿದಳು. ಪೋಲೀಸರು ಹತ್ತಿರಕ್ಕೂ ಸೇರಿಸಲಿಲ್ಲ. ಹೋಟೆಲ್ ವುಡ್‌ಲ್ಯಾಂಡ್ಸ್ ಕಾನ್ಫರೆನ್ಸ್ ಹಾಲ್‌ನಲ್ಲಿ ಬಾಂಬೆ ಟೆಕ್ಸ್‌ಟೈಲ್ಸ್ ಬಟ್ಟೆ ಪ್ರದರ್ಶನ ಮತ್ತು ಮಾರಾಟಕ್ಕಿಟ್ಟಿದ್ದ ಮಾಲೀಕ ಅಲಂಕಾರ ದೀಪ ಮಾಲೆ ಕಳೆದು ಹೋಗಿದೆ ಎಂದು ದೂರು ಕೊಟ್ಟ. ಹೋಟೆಲ್‌ನ ರಾತ್ರಿ ಕಾವಲುಗಾರ ರಾಜೇಂದ್ರನನ್ನು (32) ಗುಮಾನಿ ಮೇಲೆ ವಿಚಾರಣೆಗೆ ಕರೆದೊಯ್ದಿದ್ದರು. ಹೋಟೆಲ್ ಮಾಲೀಕ ಬಳ್ಳಕುರಾಯನ ಬಳಿ ಹೋಗಿ, ಬಂದು ಫೋನ್ ಆದರೂ ಮಾಡಿ ಸಾಕು ಬಿಡುತ್ತಾರೆಂದು ಗೋಗರೆದಳು. 10 ವರ್ಷಗಳಿಂದ ಪ್ರಾಮಾಣಿಕವಾಗಿ ದುಡಿದವನ ಬಗ್ಗೆ ಆಸಕ್ತಿ ತೋರಿಸಲಿಲ್ಲ. ಯಾರೋ ಕೊಟ್ಟ ತಿಳುವಳಿಕೆಯಂತೆ ಲಾಯರ್ ಬಳಿ ಹೋಗಿ ಕೋರ್ಟಿನಿಂದ ಸರ್ಚ್ ವಾರಂಟು ಹೊರಡಿಸಿದಳು. ಇತ್ತ 6-7 ದಿನ ರಾಜೇಂದ್ರನಿಗೆ ಪೋಲೀಸರಿಂದ ಲಾಠಿ ಏಟಿನ ರುಚಿ, ಚಿತ್ರಹಿಂಸೆಗಳ ಅಗಾಧ ಪರಿಚಯವಾಗಿತ್ತು. ಸರ್ಚ್‌ವಾರಂಟಿನ ಸುಳಿವು ತಿಳಿದ ಪೋಲೀಸರು, ತಕ್ಷಣ (9-2-83) ರಾಜೇಂದ್ರನನ್ನು ಮನೆವರೆಗೆ ಬಿಟ್ಟು ರಾಜೇಂದ್ರನ್ ಹಾಗೂ ಪುಷ್ಪಗೆ ಆಸ್ಪತ್ರೆ ಹಾಗೂ ಕೋರ್ಟುಗಳಿಗೆ ಹಾಜರಾಗದಂತೆ ಬೆದರಿಕೆ ಹಾಕಿದರು. ಯಾರನ್ನೂ ಬಂಧಿಸಿಲ್ಲವೆಂದು ಕೋರ್ಟಿಗೆ ರಿಪೋರ್ಟು ಕೊಟ್ಟರು. ಹೋಟೆಲ್ ಮಾಲೀಕನ ಬಳಿ ಹೋದ ರಾಜೇಂದ್ರನಿಗೆ ಸಿಕ್ಕಿದ್ದು ಬಾಕಿ ಸಂಬಳ 80 ರೂ. ಹಾಗೂ ಕೆಲಸಕ್ಕೆ ಬರಬೇಡವೆಂಬ ಆಜ್ಞೆ. ಮನೆಗೆಬಂದವನು ಪತ್ನಿಯನ್ನು ದಿನಸಿ ತರಲು ಕಳಿಸಿದ. ಇದ್ದ ಜೀವನಾಧಾರವೂ ತಪ್ಪಿತ್ತು. ಪೋಲೀಸರಿಂದಾದ ಹಿಂಸೆ, ಕಿರುಕುಳ ಅವಮಾನಗಳನ್ನು ತಾಳದೆ ಉಟ್ಟ ಪಂಚೆಯಲ್ಲೇ 13-2-83 ರಂದು ನೇಣು ಹಾಕಿಕೊಂಡ.

ಪ್ರಾಮಾಣಿಕ ವ್ಯಕ್ತಿಯ ಸಾವಿಗೆ ಕಾರಣರಾದ ಪೋಲೀಸರ ಕೃತ್ಯ ಸಹಿಸದ ಸಾವಿರಾರು ಜನ ಶವ ಸಮೇತ ಟೌನ್ ಸ್ಟೇಷನ್ ಮುಂದೆ ನ್ಯಾಯಕ್ಕಾಗಿ ಧರಣಿ ಕುಳಿತರು. ತಮ್ಮ ಕಳಂಕಿತ ಮೋರೆತೋರಿಸಲು ಹಿಂಜರಿದಿದ್ದ ಪೋಲೀಸರು ಕೊನೆಗೂ ಕುತಂತ್ರ ಹೂಡಿದರು. ಅದುವರೆಗೂ ಯಾವುದೇ ಪ್ರತಿಕ್ರಿಯೆ ತೋರಿಸದಿದ್ದ ಹೋಟೆಲ್ ಮಾಲಿಕ ಬಳ್ಳಕುರಾಯನನ್ನು ಕರೆಸಿದರು. ಸಹಜವಾಗಿ ಆತನ ಮೇಲಿದ್ದ ಸಿಟ್ಟು ಪೋಲೀಸರು ಎಣಿಸಿದ್ದಂತೆ ಹೊರಬಿತ್ತು. ಕಾರಿನ ಗಾಜು ಪುಡಿಯಾಯ್ತು. ಹಗ್ಗದಂತ ಚಿನ್ನದ ಸರ ಕಳುವಾಯ್ತೆಂದು (?) ರಾಯ ದೂರಿದ. ಪೋಲೀಸರ ಶ್ರೀಮಂತ ರಕ್ಷಣಾ ಪ್ರಜ್ಞೆ ಇನ್ನೊಮ್ಮೆ ಪುಟಿದೆದ್ದು ರಾಜೇಂದ್ರನ ಮೈರುಚಿ ಕಂಡ ಲಾಠಿ ಬೂಟುಗಳು ಜನರ ಮಾಂಸದ ರುಚಿ ಹಿಡಿದವು. ಕ್ಷಣದಲ್ಲಿ ಅಸಂಘಟಿತ ಜನ ಚದುರಿದರು. ಸರು ಹೊತ್ತಿನಲ್ಲೇ ಶವ ಮಣ್ಣಾಯಿತು. ವಾರಂಟ್ ಹೊರಡಿಸಿದ್ದ ಲಾಯರ್ ಒಬೇದುಲ್ಲಾ ಮೇಲೆ ಹಾಗೂ ರಾಜೇಂದ್ರನ ಹಿತೈಷಿಗಳು 10 ಜನರ ಮೇಲೆ ದರೋಡೆ ಕೇಸು ಬಿತ್ತು. ಕ್ರೈಮ್ಸ್ ಸಬ್ ಇನ್‌ಸ್ಪೆಕ್ಟರ್ ಜಗದೀಶ್, ಇನ್‌ಸ್ಪೆಕ್ಟರ್ ಪ್ರಭಾಕರ್ ಬಚಾವಾದರು. "ನಮ್ಮ ಕೈ ಬಹಳ ಉದ್ದವಾಗಿದೆ ನಿಮ್ಮನ್ನು ಹೇಗೆ ಸದೆ ಬಡಿಯಬೇಕೆಂದು ನಮಗೆ ಚೆನ್ನಾಗಿ ಗೊತ್ತಿದೆ" ಎಂದೆಲ್ಲ ರೋಪು ಹಾಕಿದ ಸರ್ಕಲ್ ಇನ್‌ಸ್ಪೆಕ್ಟರ್ ಮಾಚಯ್ಯ ಈಗ ಡಿ ವೈ ಎಸ್ ಪಿ ಆಗಿ ಬಡ್ತಿ ಪಡೆದಿದ್ದಾರೆ!

## ಜಾತಿ ದಳ್ಳುರಿಯಲ್ಲಿ ಬೆಂದ ಮನೆ, ಮನಸ್ಸುಗಳು

24-2-83ರಂದು ಶಿರಾ ತಾ॥ ಬರಗೂರು ಹತ್ತಿರದ ಕದಿರೇ ಹಳ್ಳಿಯಲ್ಲಿ ದಲಿತರ ಹಟ್ಟಿಗೆ ಗೌಡರ ಗುಂಪು ಬೆಂಕಿ ಇಟ್ಟಿದೆ. ಎಂಟು ಗುಡಿಸಲು, 3 ಹುಲ್ಲು ಬಣವೆಗಳು ಸುಟ್ಟು ಭಸ್ಮವಾಗಿವೆ. 6 ಮಾಳಿಗೆ ಮನೆಗಳು ನೆನೆದು ನಿಟ್ಟುಸಿರು ಬಿಟ್ಟಿವೆ. ಹಿಂದಿನ ರಾತ್ರಿ ಒಂಭತ್ತೂವರೆ ಗಂಟೆಯಲ್ಲಿ ಬೆಲ್ಲ ಪುಡಿ ತರಲು ಊರೊಳಕ್ಕೆ ಹೋಗಿ ಹಟ್ಟಿಗೆ ಹಿಂದಿರುಗುವಾಗ ನಾರಾಯಣ ಗೌಡನ ಮಗ ಮಂಜಣ್ಣನೆಂಬ ಪಡ್ಡೆ ಹುಡುಗ ವಿವಾಹಿತ ಮಹಿಳೆಯೊಬ್ಬಳನ್ನು ಕೆಣಕಿದ. ಆಕೆ ಕೂಗಿಕೊಂಡಾಗ ಅಕಪಕ್ಕದವರು ಬಂದಿದ್ದರಿಂದ ಬಚಾವಾದಳು. ಬೆಳಿಗ್ಗೆ ನ್ಯಾಯ ಮಾಡುವ ಹಿರಿಯರ ತೀರ್ಮಾನದಂತೆ ಗಲಭೆ ನಿಂತಿತು. ಬೆಳಿಗ್ಗೆ ಆ ಹೆಂಗಸನ್ನು ಗೌಡತಿ ಸಾಕಮ್ಮ ತನ್ನ ಮಗನ ಹೆಸರನ್ನು ಕೆಡಿಸುತ್ತಾಳೆಂದು ತರಾಟೆಗೆ ತೆಗೆದುಕೊಂಡಳು. ಮಾತು ಜಗಳವಾಗಿ ಗೌಡರ ಗುಂಪು ಆ ಕುಟುಂಬದವರ ಮೇಲೆ ಹಲ್ಲೆ ನಡೆಸಿತು. ಒಬ್ಬರಿಗೆ ತಲೆಗೆ ಇನ್ನೊಬ್ಬರಿಗೆ ಕಾಲಿಗೆ ಪೆಟ್ಟಾಯಿತು. ಆಸ್ಪತ್ರೆ ಮತ್ತು ಪೋಲೀಸ್ ಮೊರೆ ಹೊಕ್ಕರು. ಪಟ್ಟನಾಯ್ಕನ ಹಳ್ಳಿ ಠಾಣೆಯಿಂದ ಒಬ್ಬ ದಫೇದಾರ್ ಇಬ್ಬರು ಪೇದೆಗಳು ರಾತ್ರಿ ಕಾವಲಿಗೂ ಬಂದರು. ಆದರೂ ಅನಾಹುತ ತಪ್ಪಲಿಲ್ಲ. ರಾತ್ರಿ ಸುಮಾರು ಮೂರೂವರೆ ಗಂಟೆಗಳಲ್ಲಿ ಹಟ್ಟಿ ಬೂದಿಯಾಯಿತು. ಬೆಂಕಿ ಇಟ್ಟು ಓಡಿದ

ಗರಾಜ, ಪ್ರೇಮಕುಮಾರ ಹಾಗೂ ಉಮೇಶ ವರುಗಳನ್ನು ನರಸಿಂಹಯ್ಯ ಹಾಗೂ ಪೋಲೀಸ ಬೆನ್ನಟ್ಟಿದರೂ ಪರಾರಿಯಾದರು.

ಸುಗ್ಗಿಯ ಕಾಲವಾದ್ದರಿಂದ ಎಲ್ಲ ಮನೆಗಳಲ್ಲೂ ವಸ ಧಾನ್ಯಗಳಿದ್ದವು. ಭತ್ತ, ರಾಗಿ, ಕಡಲೆ ಯಿ, ಹುರುಳಿ, ಹಾರಕ, ತೊಗರಿ ಮುಂತಾದ್ದು ೕಲಗಳಲ್ಲಿ ಗುಡಾಣಗಳಲ್ಲಿ ಬೆಂದು ಕರಕು ರಾಶಿ ಶಾಗಿದ್ದವು. 40-50 ಕೋಳಿಗಳು ಸುಟ್ಟು ೋಗಿದ್ದವು. ಅರ್ಧ ಬೆಂದ ಹುಂಜವೊಂದು ಬೆಂದ ಟ್ಟಿಗೇ ಒಡೆಯನಂತೆ ಓಡಾಡುತ್ತಿತ್ತು. ಪೋಲೀ ಅಂದಾಜಿನಂತೆ ಆದ ನಷ್ಟ 25 ಸಾವಿರ ರೂ. ಳು. ಗುಡಿಸಲುಗಳನ್ನು ಕಳೆದುಕೊಂಡ ಕುಟುಂ ಗಳು ದಾನಿಗಳು ನೀಡಿದ ದವಸದಲ್ಲಿ ಅಡಿಗೆ ಾಡಿಕೊಂಡು ಬಟ್ಟ ಬಯಲಲ್ಲಿ ತಿಂದು ಮಲಗು ಸ್ಥಿತಿ ಮಾನವೀಯತೆಯನ್ನೇ ಅಣಕಿಸುವಂಥಾ ್ದು. ಪತ್ರಿಕಾ ವರದಿಗಾರರೂ ಇತರ್‍ಯಾರಾದರೂ ಟ್ಟಣಗಳಿಂದ ಹೋದರೆ ಸರ್ಕಾರದ ಅಧಿಕಾರಿಗ ಂದು ತಿಳಿದು ಪರಿಪರಿಯಾಗಿ ಅವರ ಸಂಕಟ ೋಡಿಕೊಳ್ಳುತ್ತಾರೆ. ಪೋಲೀಸರು ಮಿಕ್ಕಂತೆ ಮರ್ಪಕವಾಗಿ ಕೆಲಸ ನಿರ್ವಹಿಸಿದ್ದರೂ ಸರ್ಕಾರ ಂದ ಯಾವ ಪರಿಹಾರವೂ ಇವರಿಗೆ ದೊರೆತಿಲ್ಲ.

ಇವಿಷ್ಟು ಹೊರ ನೋಟಕ್ಕೆ ಕಂಡು ಬರುವ ತ್ರ. ಆದರೆ ಒಳ ಹೊಕ್ಕು ನೋಡಿದರೆ ಜಾತಿ ಂಕಿಯಲ್ಲಿ ಬೇಯುತ್ತಿರುವ ಮನಸ್ಸುಗಳೇ ಕಂಡಾ ). ಒಂದೆರಡು ವರ್ಷಗಳಿಂದ ಸತ್ತ ದನ ಹೊರುವ ಮುಂತಾದ ಬಿಟ್ಟಿ ಚಾಕರಿಗಳನ್ನು ಇವರು ಬಿಟ್ಟಿದ್ದ ಂದ ಗೌಡರುಗಳಿಗೆ ಕಣ್ಣು ಕುಕ್ಕಿದೆ. ದೀಪಾವಳಿ ಂಗಳಲ್ಲಿ ಊರಲ್ಲಿ ಗೌರಮ್ಮನನ್ನು ಕೂರಿಸಿ ಣ್ಣು ಮಕ್ಕಳು ಕೋಲು ಹುಯ್ಯುವುದು ಇಲ್ಲಿ ಾಡಿಕೆ. ಈ ಸಾರಿ ದಲಿತ ಹೆಣ್ಣು ಮಕ್ಕಳೂ ೋಲು ಹುಯ್ದು ಪೂಜೆಗೆ ಹೋದರು. ಇವರು ೋಗುವಷ್ಟರಲ್ಲೇ ಗೌರಮ್ಮನನ್ನು ಎತ್ತಿ ಪೂಜೆ ನಿರಾಕರಿಸಿ ತಪ್ಪಿಸಿದ್ದರು. ಅಲ್ಲದೆ ದರಿದ್ರ ರಾಜ ೕಯದ ಸೇಡು : ಇಲ್ಲಿನ ದಲಿತರು ಕಾಂಗ್ರೆಗೆ ಟು ಮಾಡಿದ್ದು ಈ ಜನತಾ ಮಂದಿಗೆ ಸಿಟ್ಟು ಂದಿತ್ತು. ಇಲ್ಲಿನ ಸ್ವತಂತ್ರ ಎಂ. ಎಲ್. ಎ. ಮುಡ್ಡೇಗೌಡ ರಾತ್ರಿ 3 ಗಂಟೆಯಲ್ಲಿ ಊರಿಗೆ ೕಟಿ ಕೊಟ್ಟರೂ ಬಂದದ್ದು ಗೌಡರನ್ನು ವಿಚಾರಿ ಲು. ಎಲ್ಲಾ ಸೇಡುಗಳೂ ಒಟ್ಟಾಗಿ ಗೌಡ ಪ್ರಜ್ಞೆ ಹಾಗಿ ಹೊರಹೊಮ್ಮಿ ಕಾಣಿಸಿಕೊಂಡ ದ್ವೇಷ ್ವಾಲೆ ಈ ಗುಡಿಸಲುಗಳ ಮುಗಿಲೆತ್ತರದ ಬೆಂಕಿ ್ವಾಲೆ. ಗುಡಿಸಲುಗಳು ಸುಟ್ಟು ಬೂದಿಯಾಗಿ ಸ್ತಿ ಪಾಸ್ತಿ ನಷ್ಟ ಆಯಿತು, ಚಿಂತೆಯಿಲ್ಲ. ರಾತ್ರಿ ೂರೂವರೆ ಗಂಟೆಯಲ್ಲಿ ಗುಡಿಸಲುಗಳಲ್ಲಿ ದಣಿದು ಂದು ಸಕ್ಕಸರಗ ಮಲಗಿದ್ದವರು ಎಚ್ಚರ ತಪ್ಪಿದ್ದರೆ ಏನಾಗುತ್ತಿತ್ತೆಂದು ಊಹಿಸಿದರೆ ಬೆಂಕಿಯೇ ನಮ್ಮನ್ನು ಸುತ್ತುವರಿದಂತಾಗಿ ಉಸಿರು ಕಟ್ಟಿಸುತ್ತದೆ.

## ಅಸ್ಪೃಶ್ಯತೆಯ ಒಂದು ಮಾದರಿ

ಪ್ರಾಚೀನದಿಂದ ಗಣೇಶನ ಉತ್ಸವಕ್ಕೆ ಪ್ರಸಿದ್ಧವಾದ ಗೂಳೂರು ತುಮಕೂರಿಗೆ 3 ಮೈಲಿ. ಇಲ್ಲಿರುವ ಹೋಟೆಲುಗಳಲ್ಲಿ ಹೊಲೆ ಮಾದಿಗರು ಹೊರಗೇ ತಿನ್ನಬೇಕು. ತಡಿಕೆಗೆ ಸಿಕ್ಕಿಸಿರುವ ಇಲ್ಲ ಗೂಡುಗಳಲ್ಲಿ ಹೊರಗಿಟ್ಟಿರುವ ಲೋಟಗಳಲ್ಲಿ ಕಾಫಿ ಕುಡಿಯಬೇಕು. ಲಿಂಗಾಯತರ ಹೋಟೆಲುಗಳಿರುವ ಇಲ್ಲಿ ಕರೀಂ ಸಾಬ್ ಎಂಬ ಮುಸ್ಲಿಮರ ಹೋಟೆಲೂ ಇದೆ. ರಾಜ ಎಂಬ ಕಾಲೇಜು ವಿದ್ಯಾರ್ಥಿ ತನ್ನ ಸಹಪಾಠಿಗಳೊಂದಿಗೆ ಕರೀಂಸಾಬರ ಹೋಟೆಲಿಗೆ ಹೋದ. 'ಅರೆ ನೀವಾಕ್ ಬಂದ್ರಿ ಒಳಗೆ, ಹೋಗಿ, ಹೋಗಿ'. 'ನಾವೇನಾಗಿದ್ದೀವಿ, ಯಾಕೆ ಬರಬಾರ್‍ದು ಕಾಫಿ ಕೊಡು' ಎಂದು ಕೇಳಿದರು. ಕಾಫಿ, ಟೀ ಎಲ್ಲ ಮುಗಿದು ಹೋಗಿದೆ ಎಂಬ ಉತ್ತರ ಬಂತು. ಕೊನೆಗೆ ಹಾಲನ್ನೇ ಕೊಡು ಎಂದರು. "ಒಂದು ಹಾಲಿಗೆ 1 ರೂಪಾಯಿ ಆಗುತ್ತೆ. (ಮಾಮೂಲು ರೇಟು : 30 ಪೈಸೆ) ಹೊರಗಡೆ ಲೋಟ ಇದೆ ತೊಳಕೊ". "ಎಲ್ಲ ಹಾಗೇ

**ವಿಶೇಷ ಲೇಖನ**

ತೊಳಕೋತಾರೇನು ನಾವೇನು ದುಡ್ಡು ಕೊಡಲ್ವ" ಹೀಗೆ ಪಟ್ಟು ಹಿಡಿದ ಯುವಕರು ಒಳಗಿನ ಲೋಟಗಳಲ್ಲೇ ಹಾಲು ಕುಡಿದು ದುಡ್ಡು ಕೊಟ್ಟು ಬಂದರು.

ನಂತರ ಊರ ಜನರ ಬಾಯಲ್ಲಿ ಇದೇ ಗುಸು ಗುಸು ಸುದ್ದಿ. ಲಿಂಗಾಯತ ಹೋಟೆಲ್ ರಾಜಣ್ಣ (ಛೇರ್ಮನ್ ಬಾಮೈದ) ಕರೀಂ ಮುಂತಾದವರೆಲ್ಲ ಕೂಡಿ "ಈ ದಿನ ಒಂದು ಹೋಟೆಲ್‌ಗೆ ಬಂದವರು ನಾಳೆ ಇನ್ನೊಂದು ಹೋಟೆಲ್. ಹೀಗೇ ಬಿಟ್ಟರೆ ಆಗಲ್ಲ ಈ ಮಾದಿಗ್ ನನ್ ಮಕ್ಳು ಕೊಬ್ಬಿದ್ದಾರೆ" ಎಂದು ಗುಂಪು ಕಟ್ಟಿ ಊರಿನ ಜನರನ್ನು ಪ್ರಚೋದಿಸಿದರು. ಮನೆ ಕಡೆ ಬರುತ್ತಿದ್ದ ಗಂಗ ಎಂಬ ಯುವಕನನ್ನು ರಾಜಣ್ಣ ಕಾಲಿನಿಂದ ಹಿಂದಕ್ಕೆ ಬೀಳುವಂತೆ ಒದ್ದು ಹಲ್ಲೆ ಮಾಡುವ ಮೂಲಕ ಪ್ರಾರಂಭವಾದ ಗಲಭೆ ಊರಿನ ಜನರೆಲ್ಲ ದಲಿತ ಹಟ್ಟಿಗೆ ನುಗ್ಗಿ ಮುತ್ತಿಗೆ ಹಾಕಿ ಅನೇಕರನ್ನು ಥಳಿಸುವಂತಾಯ್ತು. ಪೋಲೀಸ್ ಪ್ರವೇಶದಿಂದ ಮುಂದಾಗಬಹುದಾಗಿದ್ದ ಗಲಭೆ ನಿಂತಿತಾದರೂ ಯಾವ ಕಾನೂನು ಕ್ರಮವನ್ನೂ ಪೋಲೀಸರು ತಪ್ಪಿತಸ್ಥರ ಮೇಲೆ ಕೈಗೊಂಡಿಲ್ಲ. ಎಲ್ಲ ಹೋಟೆಲುಗಳನ್ನು ಮುಚ್ಚಿ ದಲಿತರಿಗೆ ಪ್ರವೇಶವನ್ನು ಒಟ್ಟಾರೆ ನಿರಾಕರಿಸಿದರು. ಪೋಲೀಸರ ಒತ್ತಾಯದಿಂದ ಹೋಟೆಲ್ ತೆಗೆದರೂ ವ್ಯವಸ್ಥೆಯೇ ಬದಲಾಗಿದೆ. ಎಲ್ಲರಿಗೂ ಎಲೆಗಳಲ್ಲಿ ತಿಂಡಿ ತಿನಿಸುಗಳನ್ನು ಕೊಡುತ್ತಾರೆ. ಮೊದಲಿದ್ದ ತಟ್ಟೆಗಳನ್ನು ಪಾಕದ ಕಡ್ಲೆಗೆ ಹಾಕಲು ಕಾದಿದ್ದಾರೆ. ಕರೀಂಸಾಬರು ಅವರಿಗೆ ತಿಂಡಿ ಕೊಡಬೇಕಾಗುತ್ತದೆಂದು ಹೋಟೆಲ್‌ನೇ ಮುಚ್ಚಿದ್ದಾರೆ. ರಾಜಣ್ಣ ಅಲ್ಲಿಗೆ ಹೋಗುವ ದಲಿತರಿಗೆ ನಿಮ್ಮಲ್ಲಿ ಯಾರನ್ನಾದರೂ ಇರಿದ ನಂತರವೇ ನಾನು ಹೋಟೆಲ್ ಮುಚ್ಚುವುದು ಎಂದು ಬಹಿರಂಗವಾಗಿ ಮೂದಲಿಸುತ್ತಿದ್ದಾನೆ.

## ನಗರದಲ್ಲಿ ಯುವಕನ ಕೊಲೆ

8-3-83 ರ ಬೆಳಗಿನ ಜಾವ ತುಮಕೂರಿನ ಕುರಿಪಾಳ್ಯ ಕಾಲೋನಿಯಲ್ಲಿ ಗಂಗರಂಗಯ್ಯ (25) ಎಂಬ ಯುವಕನ ಕೊಲೆಯಾಗಿದೆ. ಕುರಿಪಾಳ್ಯದಲ್ಲಿ ನಗರ ಸಭೆಯ ಪೌರ ಕಾರ್ಮಿಕರೇ ಹೆಚ್ಚು. ಪಕ್ಕದಲ್ಲಿ ಮರಾಠಿಗರೊಬ್ಬರು ಅಂಗಡಿ ಇಟ್ಟಿದ್ದಾರೆ. ಈ ಕುಟುಂಬದ ಲಲಿತಾಬಾಯಿ (23) ಗಂಡನ್ನ ಬಿಟ್ಟು ಬಂದು ತವರಿನಲ್ಲೇ ಇದ್ದಾಳೆ. ಈಕೆಗೂ ಗಂಗರಂಗಯ್ಯನಿಗೂ ಸು. 1 ವರ್ಷದಿಂದ ಸಂಬಂಧ ಬೆಳೆದು ಪ್ರೇಮಿಗಳಾಗಿದ್ದರು. ತಾಯಿಗೆ ಈ ವಿಷಯದಲ್ಲಿ ಷಾಮೀಲಾಗಿ ಈತನಿಂದ ಆಗಾಗ ಹಣ ಕೊಟ್ಟಿದ್ದೂ ಉಂಟು. ಜರೂರು ವೇಳೆಯಲ್ಲಿ ಉಂಗುರ ಅಡವಿಟ್ಟು ಹಣ ಕೊಟ್ಟಿದ್ದೂ ಉಂಟು. ತಮ್ಮ ತಂಗಿ ಹರಿಜನ ಯುವಕನೊಡನೆ ಸಂಬಂಧ ಬೆಳೆಸಿದ್ದನ್ನು ಅಣ್ಣಂದಿರು ಸಹಿಸಲಿಲ್ಲ. ಅದಕ್ಕೂ ಹಿಂದೆ ಇತರರೊಡನಿದ್ದ ಸಂಬಂಧವನ್ನು ಹೇಗೋ ನುಂಗಿಕೊಂಡಿದ್ದರು. 7-3-83 ರ ರಾತ್ರಿ 1 ಗಂಟೆಯಲ್ಲಿ ಹರಿಕತೆ ಕೇಳುತ್ತಿದ್ದ ಕಡೆ ಬಂದು ಲಲಿತಾಬಾಯಿ ಗಂಗರಂಗಯ್ಯನನ್ನು ಕರೆದುಕೊಂಡು ಹೋದದ್ದನ್ನು ಕಂಡವರು ಹೇಳುತ್ತಾರೆ. ಬೆಳಿಗ್ಗೆ ಕಂಡದ್ದು ಲಲಿತಾಬಾಯಿ ಅವರ ಮನೆ ಮುಂದೆ ಬಿದ್ದಿದ್ದ ಗಂಗರಂಗಯ್ಯನ ಶವ. ಅಂಗಾತವಾಗಿ ಬಿದ್ದು ತಲೆಗೆ ಭಾರಿ ಹೊಡೆತ ಬಿದ್ದು ರಕ್ತಸ್ರಾವವಾಗಿತ್ತು. ಎಡಗೈಗೆ ಅಂಟಿದ್ದ ಗೋಡೆ ಸುಣ್ಣ ಹಲ್ಲೆ ಕಾಲದಲ್ಲಿ ರಕ್ಷಣೆಗೆ ಗೋಡೆ ಹಿಡಿದಿದ್ದನ್ನು ತಿಳಿಸುತ್ತೆ. ಜಗಿದ ತಾಂಬೂಲ ಹಾಗೂ ಕಾಲಿಗೆ (ಹಾಕಿದ್ದ ಮೆಟ್ಟಿಗೆ) ಮೆತ್ತಿಕೊಂಡಿದ್ದ ಬೇಯಿಸಿದ ಮರಗೆಣಸು ಮನೆ ಒಳಗಲ್ಲದೆ ಹೊರಗೆ ಆಗಿರಲು ಸಾಧ್ಯವಿಲ್ಲ. ಲಲಿತಾಬಾಯಿ ಮತ್ತು ಸೋದರರನ್ನು-ಶಿವಾಜಿ, ಕೃಷ್ಣೋಜಿರಾವ್, ನಾರಾಯಣರಾವ್ ಇವರನ್ನು ಬಂಧಿಸಿ ಪೋಲೀಸರು ಕ್ರಮ ಕೈಗೊಂಡಿದ್ದಾರೆ. ಮೈನರ್ ಹುಡುಗ (ತಮ್ಮ) ನೊಬ್ಬನಿಗೆ ತಾನೇ ಹೊಡೆದೆನೆಂದು ಒಪ್ಪಿಸಿ ಕೇಸು ಹೊಡೆಯುವ ಸಂಚು ನಡೆದಿದೆ.

# ಜಾತ್ಯಾಂಧ ವ್ಯವಸ್ಥೆಯಲ್ಲಿ ದಲಿತ ವಿದ್ಯಾರ್ಥಿಗಳ ಹೊಣೆ

ಮನುಷ್ಯ ಸಂಘ ಜೀವಿ; ಸಮೂಹದ ನಡುವೆ ಅವನಿಗೊಂದು ನಿರ್ದಿಷ್ಟ ಸ್ಥಾನ ಇರಬೇಕು. ಅದು ಅವನವನ ಯೋಗ್ಯತೆಗೆ ಅನುಸಾರವಾಗಿ ಬಂದಿರಬೇಕು, ಯೋಗ್ಯತೆಯು ಮುಕ್ತವಾಗಿ ಬಂದುದಾಗಿರಬೇಕು. ಆದರೆ ಇಂದು ಈ ಜಾತಿ ಪದ್ಧತಿಯು ಉಂಡು ಬಿಸುಡುವ ಎಂಜಲೆಲೆಯಂಥ ವ್ಯಕ್ತಿತ್ವಗಳನ್ನು ಒಯ್ದು ಗದ್ದುಗೆಯ ಮೇಲೆಕೂರಿಸಿದರೆ, ಇನ್ನೊಂದೆಡೆ ರತ್ನಪ್ರಾಯವಾದ ಪ್ರತಿಭೆಗಳನ್ನು ಕಸದ ಗುಂಡಿಗೆ ಬಿಸುಡುತ್ತದೆ. ದಲಿತರ ಜೀವನದಲ್ಲಂತೂ ಈ ಜಾತಿ ಪದ್ಧತಿಯು ಭಯಂಕರವಾದ ಚೇತರಿಸಿಕೊಳ್ಳಲು ಬಹುಕಾಲ ಬೇಕಾದಂತಹ ಅನಾಹುತವನ್ನುಂಟು ಮಾಡಿದೆ. ಜಾತಿಗಿಂತಲೂ ಆಳದಲ್ಲಿ ಆರ್ಥಿಕ ಅಂಶಗಳಿವೆ. ನಾವು ನಿಜಕ್ಕೂ ಒಂದು ಹಂತದಲ್ಲಿ ಹೋರಾಡಬೇಕಾಗಿರುವುದು ಆರ್ಥಿಕ ಕಾರಣಗಳಿಗಾಗಿಯೇ. ಆದರೆ ಈ ದೇಶದಲ್ಲಿ ಅದು ಸಾಧ್ಯವಾಗದಂತೆ ತಡೆಯುತ್ತಿರುವುದು ಜಾತಿ ಹಾಗೂ ಅದರಂಥ ಇನ್ನು ಕೆಲವು ಸೆಂಟಮೆಂಟ್‌ಗಳು.

ವರ್ಣಗಳ ಹೆಸರಿನಲ್ಲಿ ಶ್ರಮ ವಿಭಜನೆಯು ಇಂಡಿಯಾದಲ್ಲಿ ಸಾಧ್ಯವಾದಾಗಿನಿಂದ ಆರಂಭಿಸಿ ಪ್ರಸ್ತುತ ದಿನದವರೆಗೂ ಆ ದೌರ್ಜನ್ಯವು ದಲಿತರಿಗೆ ಮಾತ್ರವೇ ಮೀಸಲಾಗಿರುವಂತಿದೆ. ಇದಕ್ಕೆ ಕಾರಣ ಏನು ? ದಲಿತರಿಗೆ ಹೊಟ್ಟೆಗೆ, ಬಟ್ಟೆಗೆ, ಮನೆ ಇವು ಪೂರ್ಣ ಪ್ರಮಾಣದಲ್ಲಿ ದೊರೆಯುವಂತಾದರೆ ಸಮಸ್ಯೆಯೇ ಇಲ್ಲ ಎಂದು ಕೆಲವರು ವಾದಿಸುತ್ತಾರೆ. ಅಗ ಜಾತಿಯೂ ನಾಶವಾಗುತ್ತದೆ ಎಂದು ಕೆಲವು ಭ್ರಾಂತುಗಳು ಊಹಿಸುತ್ತಾರೆ. ಅದು ನಿಜವಾಗಿದ್ದಿದ್ದರೆ ಮೀನಾಕ್ಷಿಪುರದಲ್ಲಿ ಆ 55 ವರ್ಷ ವಯಸ್ಸಿನ ವ್ಯಕ್ತಿ 'ಸಾಯೋ ಸಮಯಕ್ಕಾದರೂ ಮರ್ಯಾದೆಯಿಂದ ಸಾಯೋಣ ಅಂತ ಮತಾಂತರ ಹೊಂದಲಿಕ್ಕೆ ಬಂದೀದೀನಿ' ಎಂದು ಏಕೆ ಹೇಳುತ್ತಿದ್ದ ! ಅನ್ನ ಬಟ್ಟೆ ವಸತಿ ಇವಿಷ್ಟೆ ಅಲ್ಲ. ಸಾಮಾಜಿಕವಾಗಿ ಅವರನ್ನು ಬಹುವಾಗಿ ಹಿಂಸಿಸುತ್ತಿರುವ ಅಂಶ ಎಂದರೆ ಈ ದೇಸದ ಜಾತಿ ಜಾತಿ ಕಾರಣಕ್ಕಾಗಿಯೇ ದಲಿತರು ಇಂದು ಬಹುಶಃ ಮಾನ-ಪ್ರಾಣಗಳನ್ನು ಕೈಯಲ್ಲಿ ಹಿಡಿದು ಬದುಕಬೇಕಾಗಿದೆ. ಜಾತಿ ಎಂಬುದು ಇಂಡಿಯಾ ಬಿಟ್ಟರೆ ಅಷ್ಟೇ ಪ್ರಮಾಣ-ಸ್ವರೂಪಗಳಲ್ಲಿ ಬೇರೆಲ್ಲೂ ಕಾಣಸಿಗದಂಥ ಒಂದು ಅಪರೂಪದ ವ್ಯವಸ್ಥೆ. ಲೋಹಿಯಾ ಹೇಳುವಂತೆ ಅದು 'ಜನತೆಯ ಆರೋಗ್ಯಕರ ಸ್ಪರ್ಧಾ ಮನೋಭಾವವನ್ನು ಅವರ ಸಂತೋಷವನ್ನು ಕಬಳಿಸುವಂಥ ಒಂದು ದುಷ್ಟ ಅಭಿಮಾನ. ಇದನ್ನು ಮೊಟ್ಟ ಮೊದಲ ಹಂತದಲ್ಲಿ, ಮೂಲಸ್ತರದಿಂದ ಕಿತ್ತೊಗೆಯಬೇಕಾದವರು ದಲಿತರು. ಏಕೆಂದರೆ ಅವರೇ ಜಾತಿ ಪದ್ಧತಿಯ ಪ್ರಥಮ ಬಲಿ, ದೊಡ್ಡ ಗ್ರಾಸ. ಆದರೆ ತದ್ವಿರುದ್ಧವಾಗಿದೆ ಸ್ಥಿತಿ. ಜಾತಿಗೆ ಇರುವ ಸಮ್ಮೋಹಕತೆಯಿಂದ ಬಂಧಿಸಲ್ಪಟ್ಟು ಅದನ್ನು ತಲೆ ಮೇಲಿಟ್ಟು ದಲಿತರು ಬದುಕುವುದನ್ನು ಕಾಣುತ್ತಿದ್ದೇವೆ. ಇನ್ನೂ ದುರಂತವೆಂದರೆ ವಿದ್ಯಾರ್ಥಿಗಳಲ್ಲಿ ಈ ಜಾತಿಯು ತನ್ನ ವಿಷಜಾಲವನ್ನು ಹರಡಿರುವುದು.

ಇತರರಿಗಿಂತ ಜಾತಿ ಒಡಕು ದಲಿತರಲ್ಲೇ ಹೆಚ್ಚು. ಇದೇ ರೀತಿ ಈ ಕಚ್ಚಾಟ ಮುಂದುವರೆದರೆ ಇತಿಹಾಸದಲ್ಲಿ ತುಂಬ ಅಪರೂಪಕ್ಕೆ ಸಿಕ್ಕಿರುವ ಒಂದು ಅಪೂರ್ವ ಸಂದರ್ಭವನ್ನು ತಪ್ಪಿಸಿಕೊಳ್ಳುತ್ತಾರೆ. ಡಾ॥ ಅಂಬೇಡ್ಕರ್ ಹೇಳುವಂತೆ 'ಗಣತಂತ್ರದಿಂದ ನಮಗೆ ರಾಜಕೀಯವಾಗಿ ಸಮಾನತೆಯೇನೊ ಸಿಕ್ಕಿದೆ ಆದರೆ ಅದರೊಂದಿಗೇನೇ ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳೂ ಲಭಿಸಿವೆ. ಆದ್ದರಿಂದ ನಾವು ಈ ವಿರೋಧಾಭಾಸವನ್ನು ಚಿಗುರಲ್ಲಿಯೇ ಚಿವುಟಿ ಹಾಕಬೇಕಾಗಿದೆ.

ಗುರುರಾಜ್ ಬೀಡಿಕರ್

ಒಂದು ವೇಳೆ ದಲಿತರು ಈಗ ಸ್ವಯಂ ಸಂಘಟಿತರಾಗದೇ ಹೋದಲ್ಲಿ ಇತಿಹಾಸದ ಅಥವಾ ಭವಿಷ್ಯದ ಇನ್ನಾವ ಕಾಲದಲ್ಲೂ ಅದು ಅಸಾಧ್ಯವಾಗಬಹುದು. ಏಕೆಂದರೆ ಜಾತಿಮಯವಾದ ನಮ್ಮ ಸಾಮಾಜಿಕ ವ್ಯವಸ್ಥೆಯ ವಿಷ ಅಷ್ಟು ಕಟುಗ್ರವಾದುದು. ಆದರೆ ಹಳ್ಳಿಯಲ್ಲಿ ವಾಸಿಸುವ ಶೇ. 90 ಕ್ಕಿಂತಲೂ ಹೆಚ್ಚು ದಲಿತರು ಅವಿದ್ಯಾವಂತರಷ್ಟೆ. ಅಲ್ಲದೆ ಜಾತಿ ವಿಟನಿಂದ ಸೂಳೆಯರಾದವರು. ಅವರ ವಿಚಾರ ಶಕ್ತಿ ಜಾತಿನಂಜಿನಿಂದ ಬಂಜೆಯಾಗಿದೆ. ಅವರಿಗೆ ಪ್ರಗತಿಯ ಬಗ್ಗೆ ವೈಜ್ಞಾನಿಕತೆಯ ಬಗ್ಗೆ ಹೇಳಿ ಪ್ರಯೋಜನವಿಲ್ಲ.

ಒಂದು ವೇಳೆ ನಮ್ಮ ಇತಿಹಾಸಕ್ಕೆ ಹೊಸ ತಿರುವು ಕೊಟ್ಟು ಅದನ್ನು ಬದಲು ಮಾಡುವ ಸಾಧ್ಯತೆ, ಮತ್ತು ಸಾಮರ್ಥ್ಯಗಳೇನಾದರೂ ಈ ಸ್ಥಗಿತ ಸಮಾಜದಲ್ಲಿ ಇದ್ದರೆ ಅದು ವಿದ್ಯಾರ್ಥಿಗಳಿಂದ. ಸಮರ್ಪಿತ, ಅದಟಿನ ಹೋರಾಟಗಾರರಿಂದ ಮಾತ್ರ. ಥೈಲ್ಯಾಂಡಿನಲ್ಲಿ ವಿದ್ಯಾರ್ಥಿಗಳದೇಆಡಳಿತವಿದೆ ಎಂದು ಕೇಳಿದ್ದೇನೆ. ಆದರೆ ನಮ್ಮಲ್ಲಿ, ವಿದ್ಯಾರ್ಥಿಯ ಅದಮ್ಯ ಶಕ್ತಿಯನ್ನು ಮಣ್ಣು ಮುಕ್ಕಿಸುವಂಥ ಹಿತಾಕಿಸ್ತಗಳು, ಅವರನ್ನು ದಿಕ್ಕು ತಪ್ಪಿಸಿ, ಕಂಗಾಲಾಗಿಸಿ ಅಪಮಾರ್ಗಕ್ಕೆ ಕರೆದೊಯ್ದು ತಮ್ಮ ಸ್ವಾರ್ಥವನ್ನು ತಣಿಸಿಕೊಳ್ಳುತ್ತವೆ. ಅವು ರಾಜಕೀಯ ಆಮಿಷ ತೋರುವ ಶಕ್ತಿಗಳಾಗಿರಬಹುದು, ಹಣದ ಆಸೆ ತೋರುವ ಶಕ್ತಿಗಳಾಗಿರಬಹುದು, ಧರ್ಮದ ಗುಂಗು ಹಿಡಿಸುವ ಸಂಘಟನೆಯಾಗಿರಬಹುದು. ಆದ್ದರಿಂದ ಇಂಥವುಗಳ ವಿರುದ್ಧ ನಮ್ಮ ಪ್ರಜ್ಞೆಯನ್ನು ಜಾಗೃತಗೊಳಿಸಿಕೊಳಕೆಬೇಕಾಗಿದೆ.

ಇಂದು ವಿರೋಧಾಭಾಸಗಳು ಗರಿಷ್ಠ ಮಟ್ಟ ಮುಟ್ಟಿವೆ. ರಾಜಕಾರಣಿಗಳು ಪ್ರಜೆಗಳನ್ನು ಪ್ರತಿನಿಧಿಸುವ ಬದಲು ಸುಲಿಗೆಕೋರರಾಗಿದ್ದಾರೆ. ಪೋಲೀಸರು ರಕ್ಷಿಸುವ ಬದಲು ಪಾಳೆಯಗಾರರಾಗಿದ್ದಾರೆ. ಧರ್ಮಾಧಿಕಾರಿಗಳು ಚಾಂಡಾಲರಾಗಿದ್ದಾರೆ. ಸ್ವಾಮೀಜಿಗಳು ರಾಜಕಾರಣಿಗಳಾಗಿದ್ದಾರೆ. ಅಧ್ಯಾಪಕರು ವಿದ್ಯಾರ್ಥಿ–ವಿಶ್ವವಿದ್ಯಾಲಯಗಳ ನಡುವೆ ದಳ್ಳಾಳಿ ಮಾಡುತ್ತಿದ್ದಾರೆ. ವಿದ್ಯಾಲಯಗಳು ಅವಿದ್ಯೆಯ ತವರಾಗಿವೆ. ಇವಕ್ಕೆಲ್ಲ ಹೊಣೆ ಯಾರು ಎಂದರೆ ನಾವು–ನಮ್ಮ ಪ್ರಜ್ಞಾವಂತಿ. ಮತ್ತು ಜಾಗೃತಿಗಳ ಅಭಾವವೇಹೊಣೆ. ಜನಗಳು ಸಹಿಸಿಕೊಂಡು ಇರುವುದರಿಂದತಾನೆ ದುರಾಡಳಿತದ ಪರಂಪರೆಯೊಂದು ವಂಶ ಪಾರಂಪರ್ಯವಾಗುತ್ತಿರುವುದು ಅದೂ ಪ್ರಜಾಪ್ರಭುತ್ವದಲ್ಲಿ. ಈ ಅಜ್ಞಾನದ, ಜಾಗೃತಿ ಅಭಾವದ ಕೊಚ್ಚೆ ಜನಗಳಲ್ಲಿ ಇರುವ ತನಕವೂ ಅದೇ ಸುಪುಷ್ಠ ಗೊಬ್ಬರವಾಗಿ ಇಂಥ ಹಲಾಲುಕೋರ ರಾಜಕಾರಣಿಗಳನ್ನು ಬೆಳೆಸುತ್ತದೆ. ಇಂಥವರು ವಿದ್ಯಾರ್ಥಿ ಶಕ್ತಿಯನ್ನು ಮನಗಂಡು ರಾಜಕೀಯಕ್ಕೆ ಬರದಂತೆ ವಿದ್ಯಾಭಾಸದ ಕಡೆಗೆ ಮಾತ್ರ ಗಮನವಿಡಿ ಎಂದು ಉಪದೇಶಿಸುತ್ತಾರೆ. ಆದರೆ ನಮ್ಮ ವಿದ್ಯಾರ್ಥಿಗಳಲ್ಲಿ 'ರಾಜಕೀಯ ಪ್ರಜ್ಞೆ' ಇಂದು ಬಹು ಅಗತ್ಯವಾದುದಾಗಿದೆ.

ಇಂದು ರಾಜಕೀಯ ಪ್ರವೇಶ ಮಾಡದ ಎಡೆಯೇ ಇಲ್ಲ. ನಮ್ಮ ತುತ್ತಿನಲ್ಲಿ ಸಿಕ್ಕುವ ಒಂದೊಂದು ಹರಳಲ್ಲೂ ರಾಜಕೀಯ ಇದೆ. ಇಲ್ಲದಿರುವುದು ಎಂದರೆ ಅದರ ಬಗ್ಗೆ ಇರಬೇಕಾದ ಅರಿವು ಅಷ್ಟೆ. ಈ ಅರಿವನ್ನು ವಿದ್ಯಾರ್ಥಿಗಳು ಮೊದಲು ಪಡೆದು ಇತರ ಬಡವರಿಗೂ, ದಲಿತರಿಗೂ ಹಂಚಲು ಸಾಧ್ಯ ಮಾಡಿಕೊಡುವುದಾದರೆ ಸಧ್ಯದ ಸಂದರ್ಭದಲ್ಲಿ ವಿದ್ಯಾರ್ಥಿಗಳ ಪಾತ್ರ ಅರ್ಧಕ್ಕಿಂತಲೂ ಹೆಚ್ಚು ಕಾರ್ಯಗತವಾದಂತೆ. ಇದು ಕಾರ್ಯಗತವಾಗದ

(ಮುಂದಿನ ಪುಟಕ್ಕೆ)

# ಅಸ್ಪೃಶ್ಯತೆಯ ನಿವಾರಣೆ ಒಂದು ಸಾಮಾಜಿಕ ಹೊಣೆ

— ದೈವ ಸೃಷ್ಟಿಯಲ್ಲಿ ಮಾನವರೆಲ್ಲ ಒಂದೇ. ಅಸ್ಪೃಶ್ಯತೆ ಎನ್ನುವುದು ಮಾನವತೆಗೇ ಕಳಂಕ ತರುವಂಥದು. ಇದು ಮಾನವರೇ ಸೃಷ್ಟಿಸಿಕೊಂಡ ಅಂತರ. ಈ ಸಾಮಾಜಿಕ ಪಿಡುಗನ್ನು ತೊಡೆದು ಹಾಕುವುದು ಇಡೀ ಸಮಾಜದ ಜವಾಬ್ದಾರಿ. ಇದನ್ನರಿತ ಸರ್ಕಾರ ಅಸ್ಪೃಸ್ಯತಾ ನಿವಾರಣೆಗೆ ಸತತ ಶ್ರಮಿಸುತ್ತಿದೆ.

— ಹರಿಜನರಿಗೆ ಸಾರ್ವಜನಿಕ ಹೋಟೆಲುಗಳಲ್ಲಿ ಊಟ ತಿಂಡಿ ನೀಡಲು ನಿರಾಕರಿಸುವುದು ; ಜಾತಿಯ ಆಧಾರದ ಮೇಲೆ ನಿಂದಿಸುವುದು, ಸಾರ್ವಜನಿಕ ಬಾವಿಗಳಲ್ಲಿ ನೀರು ತರುವುದನ್ನು ತಡೆಯುವುದು, ದೇವಸ್ಥಾನಗಳಿಗೆ ಪ್ರವೇಶ ಪ್ರತಿಬಂಧಿಸುವುದು ಹಾಗೂ ಈ ವರ್ಗದ ಜನರನ್ನು ಕೆಲಸಕ್ಕೆ ನೇಮಿಸಿಕೊಳ್ಳಲು ನಿರಾಕರಿಸುವುದು—ಮುಂತಾದ ಸಮಾಜ ವಿರೋಧಿ ಕಾರ್ಯಗಳು ಅಪರಾಧವೆನಿಸುತ್ತವೆ, ಹಾಗೆ ಮಾಡುವವರು ಕಾನೂನಿನ್ವಯ ಶಿಕ್ಷಾರ್ಹರು.

— ಇಂತಹ ಅವಹೇಳನಕ್ಕೆ ಒಳಗಾದ ವ್ಯಕ್ತಿಗಳು ಆ ಬಗ್ಗೆ ಸಮೀಪದ ಪೋಲೀಸ್ ಠಾಣೆಗೆ ದೂರು ನೀಡಬೇಕು. ಅಸ್ಪೃಶ್ಯತಾ ನಿವಾರಣೆಗೆ ನೆರವಾಗಬೇಕು.

**ಪ್ರಕಟಣೆ: ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ,
ಬೆಂಗಳೂರು.**

# ಬೂಟು ಬಂದೂಕಗಳ ನಡುವೆ ಮಹಾತ್ಮ 'ಗಾಂಧಿ'

(1ನೇ ಪುಟದಿಂದ)

ಕೊಂಬೆಗಳ ಸೊಬಗಿಗಷ್ಟೆ ಮಾರು ಹೋದ ಇತಿಹಾಸ ದೃಷ್ಟಿಗೆ ಸವಾಲೆಸೆದ ಅಧ್ಯಾಯ ಶುರುವಾದದ್ದು ಅಂಬೇಡ್ಕರ್‌ರವರಿಂದ. ಗಾಂಧಿಯನ್ನು ಈ ದೇಶದ ಸ್ವಾತಂತ್ರ್ಯ ಹೋರಾಟದಿಂದ ಹೇಗೆ ಬೇರ್ಪಡಿಸಲು ಸಾಧ್ಯವಿಲ್ಲವೋ ಹಾಗೇನೆ ಅಂಬೇಡ್ಕರ್ ಕೂಡ. ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ರೂಪುಗೊಳಿಸಿರುವ 'ಗಾಂಧಿ' ಅಂಬೇಡ್ಕರ್‌ರ ಪೂನ ಒಪ್ಪಂದ, ದುಂಡು ಮೇಜಿನ ಪರಿಷತ್ತು, ಗಾಂಧಿಯೊಂದಿಗಿನ ಜ್ವಾಲಾಮುಖಿ ಮಾತುಕತೆ ಇವಾವೂ ಇಲ್ಲದೆ ರೂಪುಗೊಂಡಿರುವುದರಿಂದ ಖಂಡಿತವಾಗಿ ಇದು ಇತಿಹಾಸಕ್ಕೆ ಮಾಡಿದ ಅಪಚಾರವಾದ್ದರಿಂದ ಈ ಚಿತ್ರಕ್ಕೆ ಪ್ರತಿಭಟನೆಯನ್ನು ಪ್ರತಿ ದಲಿತನೂ ತೋರಬೇಕೆಂದು. ದ. ಸಂ. ಸ. ನೇತಾರರು ಕರೆಕೊಟ್ಟಿದ್ದರು.

ಈ ಹಿನ್ನಲೆಯಲ್ಲಿ ಕರ್ನಾಟಕದ ದಲಿತ ವಿದ್ಯಾರ್ಥಿ ಒಕ್ಕೂಟ 11-3-83 ರಂದು ಪ್ರತಿಭಟನಾ ಕಾರ್ಯಕ್ರಮ ರೂಪಿಸಿತ್ತು. ಮಹಾರಾಷ್ಟ್ರದ ಅನೇಕ ಕಡೆ ಪಿಕೆಟಿಂಗ್ ಮತ್ತು ಬಾಂಬುಗಳ ನಡುವೆ ಅಂಜಿ, ಅಳುಕಿ ಓಡುತ್ತಿರವ 'ಗಾಂಧಿ' ಬೆಂಗಳೂರಿನ ಅದ್ದೂರಿ ಚಿತ್ರಮಂದಿರಗಳನ್ನು ಪ್ರವೇಶಿಸಲು ಹಿಂದೇಟು ಹಾಕಿತು. ಪ್ರದರ್ಶನಕ್ಕೆ ನಿಗದಿಯಾಗಿದ್ದ ದಿನಾಂಕ ಮುಂದಕ್ಕೆ ಹೋಯಿತು. ಗಾಂಧಿಯ ಗಿಳಿ ಸಮೂಹಕ್ಕೆ ಜ್ವರವೇರಿ ಧ್ವನಿಯೇ ಉಡುಗಿ ಹೋಗಿತ್ತು. ಇಲ್ಲಿಂದ ರವಾನೆಯಾಗುತ್ತಿದ್ದ ಗುಪ್ತ ವರದಿಗಳನ್ನು ಕೇಳಿದ ಕೇಂದ್ರ ಸರ್ಕಾರ ಮತ್ತು ಸಿನಿಮಾ ನಿರ್ಮಾಪಕರು "ನಿಮ್ಮ ಥಿಯೇಟರುಗಳಿಗೇನಾದರೂ ಆದರೆ ನಾವು ಜವಾಬುದಾರರು. ಎಲ್ಲ ನಷ್ಟ ನಾವೇ ಬರಿಸುತ್ತೇವೆ" ಎಂದು ಭರವಸೆ ನೀಡುವ ತನಕ ಥಿಯೇಟರ್ ಜನ 'ಗಾಂಧಿ'ಯನ್ನು ಒಳಗೇನೆ ಬರಮಾಡಿಕೊಳ್ಳಲಿಲ್ಲ.

ಆದರೆ ಗಾಂಧಿ ಮತ್ತು ಅವನ ತತ್ವಗಳಿಗೆ ಗೋರಿ ತೋಡಿರುವ ನೀಚರು ಭೀತಿಗೊಂಡಂತೆ ಒಕ್ಕೂಟವೇನೂ ವಿಛಿದ್ರಕಾರಿ ಕಾರ್ಯಕ್ರಮ ಹಾಕಿಕೊಳ್ಳಲಿಲ್ಲ. ಮೌನ, ವಿನಯಗಳ ಮೈವೆತ್ತ ವೇಲಾಯುಧನ್, ನೆತ್ತರಲ್ಲಿ ಜ್ವಾಲಾ ಮುಖಿಯುಳ್ಳ ಚಿಕ್ಕಬೋರಯ್ಯ ಕೊಂಚ ಉಗ್ರವಾದಿಯಂತೆ ಎಗರಾಡುತಿದ್ದ ಮೂರ್ತಿ ಮತ್ತು ಸಹೋದರರು ಎಲ್ಲರೂ ಕೂಡಿ ಅತ್ಯಂತ ಪ್ರಜಾಸತ್ತಾತ್ಮಕವಾಗಿ ಪ್ರತಿಭಟನ ಕಾರ್ಯಕ್ರಮ ರೂಪಿಸಿದರು. ಇವರು ಗೆಳೆಯರೊಡಗೂಡಿ ಹಗಲು ರಾತ್ರಿ ದುಡಿದರು. ಬೆಂಗಳೂರಿನ ಗೋಡೆಗಳ ಮೇಲೆ 'ಗಾಂಧಿ' ಚಿತ್ರದ ಭಿತ್ತಿಪತ್ರಗಳು ಮುಚ್ಚಿ ಹೋಗುವಷ್ಟು 'ಅಂಬೇಡ್ಕರ್' ಭಾವಚಿತ್ರದ 'ಗಾಂಧಿ' ವಿರುದ್ಧದ ಪ್ರತಿಭಟನೆಯ ಭಿತ್ತಿಪತ್ರಗಳು ಎದ್ದು ನಿಂತವು.

11-3-83ರಂದು ಸುಮಾರು 5 ಸಾವಿರ ಮಂದಿ ದಲಿತ ವಿದ್ಯಾರ್ಥಿ, ಯುವಜನರು ಕಬ್ಬನ್ ಪಾರ್ಕಿನ ಮೂಲಕ ವಿಧಾನ ಸೌಧದ ಎದುರು ನಿಂತ ಅಂಬೇಡ್ಕರ್ ಪ್ರತಿಮೆ ಬಳಿ ಸೇರುವುದರಲ್ಲಿದ್ದರು. ಆದರೆ ಮತಿಗೇಡಿ ಪೋಲೀಸರು ವಿಧಾನ ಸೌಧದ ಸುತ್ತ ನಿಷೇಧಾಜ್ಞೆ ಜಾರಿಗೊಳಿಸಿದ್ದರಿಂದ ಅದು ಸಾಧ್ಯವಾಗಲ್ಲಿಲ್ಲ. ಕೇವಲ ಐದಾರು ವಿದ್ಯಾರ್ಥಿಗಳಿಗೆ ಮಾತ್ರ ಪ್ರತಿಮೆಗೆ ಹಾರ ಹಾಕಲು ಅವಕಾಶ ನೀಡಲಾಯಿತು. 'ಗಾಂಧಿ' ಚಿತ್ರ ಪ್ರದರ್ಶನವನ್ನು ಎಷ್ಟೆ ಪ್ರತಿಭಟನೆ ಬಂದರೂ ನಡೆಸಲು ಟೊಂಕ ಕಟ್ಟಿ ನಿಂತ ಸರ್ಕಾರ 5 ಸಾವಿರ ಜನಕ್ಕೆ ತಮ್ಮ ನಾಯಕನ ಪ್ರತಿಮೆಯ ಬಳಿ ಸೇರುವ ಹಕ್ಕನ್ನೂ ನಿರಾಕರಿಸಿತು.

ಕೆ. ಆರ್. ವೃತ್ತದ ಮೂಲಕ ಹೊರಟ ಮೆರವಣಿಗೆಯ ಘೋಷಣೆಗಳು ವಿಧಾನಸೌಧ ಒತ್ತಟ್ಟಿಗಿರಲಿ ಇಡಿ ಬೆಂಗಳೂರನ್ನೇ ನಡುಗಿಸಿದವು. ಪೋಲಿಸರ ಉದ್ಧಟತನದಿಂದಾಗಿ ಅಲ್ಲಲ್ಲಿ ಉದ್ರೇಕ ಉಂಟಾಗುತ್ತಿದ್ದರೂ ಮೆರವಣಿಗೆ ಶಾಂತವಾಗಿತ್ತು.

'ಲಿಡೊ' ಚಿತ್ರ ಮಂದಿರದ ಹತ್ತಿರಕ್ಕೆ ಮೆರವಣಿಗೆ ಬಂದಾಗ ಅಲ್ಲಿನ ದೃಶ್ಯವೇ ಬೇರೆ ಇತ್ತು. ಬೆಂಗಳೂರಿನ ಇಡೀ ಪೋಲೀಸರು ಅಲ್ಲಿ ರಸ್ತೆ ಯುದ್ಧಕ್ಕೂ ಅಡ್ಡಗಟ್ಟಿ ನಿಂತಿದ್ದರು. ರಸ್ತೆಯಲ್ಲಿ ಅಲ್ಲಲ್ಲಿ ಮೆರವಣಿಗೆಕಾರರನ್ನು ತಡೆಯಲು ಬ್ಯಾರಕ್‌ಗಳನ್ನು ನಿರ್ಮಿಸಲಾಗಿತ್ತು.

ಅಲೆಗಟ್ಟಿಕೊಂಡ ಪ್ರದರ್ಶನಕಾರರು ಸಿನಿಮಾ ಮಂದಿರದತ್ತ ಇನ್ನೇನು ನುಗ್ಗಲು ಯತ್ನಿಸಿದಾಗ ಸಾಲು ಸಾಲು ಬಂಧನಗಳಾದವು. ಸುಮಾರು 400 ಮಂದಿಯ ಬಂಧನವಾಯಿತು. ಇನ್ನುಳಿದವರನ್ನು ಬಂಧಿಸಲು ವ್ಯಾನುಗಳಿಲ್ಲದೆ ಪೋಲೀಸರು ವಾಪಾಸಾಗುವಂತೆ ಕೇಳಿಕೊಳ್ಳುತ್ತಿದ್ದರು.

ಬಂಧಿತರಲ್ಲಿ ದಲಿತ ಸಂಘರ್ಷ ಸಮಿತಿಯ ರಾಜ್ಯ ಸಂಚಾಲಕ ಬಿ. ಕೃಷ್ಣಪ್ಪ, ಕೋಲಾರ ಜಿಲ್ಲಾ ಸಂಚಾಲಕ ಸಿ. ಮುನಿಯಪ್ಪ, ಬೆಂಗಳೂರು ಜಿಲ್ಲಾ ಸಂಚಾಲಕ ವೆಂಕಟಸ್ವಾಮಿ ಮತ್ತು ವಿದ್ಯಾರ್ಥಿ ಒಕ್ಕೂಟದ ನಾಯಕರು ಇದ್ದರು. ಬಂಧಿತರನ್ನು ಕೋರಮಂಗಲದ ಬಯಲು ಜೈಲಿನಲ್ಲಿ ಸಂಜೆಯವರೆಗೆ ಇಟ್ಟಿದ್ದು ನಂತರ ಬಿಡುಗಡೆ ಮಾಡಿದರು. ಅಂದಿನಿಂದ ಇಂದಿನವರೆಗೆ 'ಗಾಂಧಿ' ಬಂದೂಕು, ಬೂಟುಗಳ, ಪಹರೆಯಲ್ಲಿ ನಡೆಯುತ್ತಿದ್ದಾನೆ.

## ವಿಜಯ್ ತೆಂಡೋಲ್ಕರ್‌ರವರ ಹೊಸ ದಲಿತ ಸಿದ್ಧಾಂತ!

ಪ್ರಿಯರೇ,

ಇತ್ತೀಚೆಗೆ ಮರಾಠಿಯಲ್ಲಿ ಒಂದು ನಾಟಕ ಬಂದಿದೆ. ಹೆಸರು. 'ಕನ್ಯಾದಾನ' ಅದರ ಕರ್ತೃ ಅಖಿಲ ವಿಶ್ವ ಪ್ರಖ್ಯಾತಿಯ ವಿಜಯ್ ತೆಂಡೂಲ್ಕರ್. ಇಲ್ಲಿ ನಡೆಯಿಸಲಾಗಿರುವ ಕೆಲವು ಸಂಗತಿಗಳ ಕಡೆಗೆ ಗಮನಹರಿಸುವುದು ಉತ್ತಮವೆಂದು ಭಾವಿಸಿ ಈ ಪತ್ರ ಬರೆಯುತ್ತಿರುವೆ.

ಒಂದು ಬ್ರಾಹ್ಮಣ ಕುಟುಂಬ. ಮನೆಯ ಯಜಮಾನ ಅಪ್ಪಟ್ಟ ಗಾಂಧೀ ಸಮಾಜವಾದಿ, ಆತನ ಹೆಂಡತಿ ಸೇವಾ, ಮಗಳ ಹೆಸರು ಜ್ಯೋತಿ, ಮಗ ಜಯಪ್ರಕಾಶ್. ಹೀಗೆ ಇಡೀ ಕುಟುಂಬ ಆದರ್ಶ ಸಮಾಜವಾದದ ಸಮಾಸಮ. ಅಂತರ ಜಾತಿ ವಿವಾಹದಿಂದ ಬದಲಾವಣೆ ಮತ್ತು ಪರಸ್ಪರ ಅರಿವು ಮೂಡುವುದು ಸಾಧ್ಯ ಎಂಬ ನಂಬಿಕೆಯಿಂದ ಸಮಾಜವಾದಿ ಅಪ್ಪ ತನ್ನ ಮಗಳನ್ನು ಹರಿಜನ ಯುವಕನಿಗೆ 'ಕನ್ಯಾದಾನ' ಮಾಡುತ್ತಾನೆ. ಮದುವೆಗೆ ಹೆಂಡತಿಯ ವಿರೋಧ ಇದೆ.

ಆ ಹರಿಜನ ಯುವಕ ; ತನ್ನ ಬಾಲ್ಯದ ಹೀನಾಯದ ಬದುಕನ್ನೆ ಬಂಡದಲು ಮಾಡಿಕೊಂಡು; ಆತ್ಮಕತೆ, ಕವಿತೆ ಬರೆದು, ಬಹಳ-ಬಹಳ ಪ್ರಸಿದ್ಧಿಗೆ ಬಂದಿರುವ ಒಬ್ಬ ಬರಹಗಾರ. ಆದರೆ ಏನೂ ಉದ್ಯೋಗ ಮಾಡದೆ, ಹೆಂಡತಿ ಸಂಬಳ ತಿಂದುಕೊಂಡು ಬದುಕುವ ಉಂಡಾಡಿ. ಆತ ಎಷ್ಟು ಕ್ರೂರಿ ಅಂದರೆ ಪಾಪ ಗರ್ಭಿಣಿಯಾದ ತನ್ನ ಬ್ರಾಹ್ಮಣ ಪತ್ನಿಯ ಹೊಟ್ಟೆಯ ಮೇಲೆ ದಬಾದಬಾ ಒದೆಯುವಷ್ಟು ! ನನ್ನ ಅಪ್ಪನೂ ನನ್ನ ಅವ್ವನನ್ನು ಹೀಗೇ ಬಡಿಯುತ್ತಿದ್ದ ಎಂದು ಹೇಳುತ್ತಾನೆ.

ಹಾಗಾಗಿ ಸಮಾಜವಾದಿ ಬ್ರಾಹ್ಮಣ ಕುಟುಂಬದ ಸುಸಂಸ್ಕೃತ ಬದುಕು ಂಗೆಡುತ್ತದೆ. 'ಶೋಷಣೆಗೊಳಗಾದ ಜನರ ಕೈಗೆ ಅಧಿಕಾರ ಬಂದರೆ ಅವರು ಶೋಷಕರಾಗುತ್ತಾರೆ. ಪಾಲಸ್ಟೈನ್ ನಿರಾಶಿತ್ರರ ಮೇಲೆ ಯಹೂದಿಗಳು ನಡೆಸುತ್ತಿರುವ ದಬ್ಬಾಳಿಕೆ ತರಹ ಎಂದು ಆ ಹರಿಜನ ಯುವಕ ಸಿದ್ಧಾಂತ ಕೂಡ ಹೇಳುತ್ತಾನೆ.

ಇಷ್ಟು ಸಾಕು.

ಸುಚೇತನ ಸ್ವರೂಪ
ಬೆಂಗಳೂರು

# ಕ್ರೈಸ್ತರನ್ನು ಕಾಡುತ್ತಿರುವ ಜಾತಿ ವಿಷ

ದಿನಾಂಕ 10-2-83 ರ ಗುರುವಾರ ನಾಗನಹಳ್ಳಿ ಗ್ರಾಮದಿಂದ ಸುಮಾರು 20-25 ಸ್ತ್ರೀಯರನ್ನು ಪಕ್ಕದ ಗ್ರಾಮವಾದ ಹೆಗ್ಗಡಾಪುರಕ್ಕೆ ಬತ್ತದ ಪೈರಿನ ನಾಟಿ ಮಾಡಲು ಕರೆತರಲಾಯಿತು. 5-6 ಸ್ತ್ರೀಯರು ಹಿಂದು ಜನಾಂಗದವರು. ಉಳಿದವರು ಕ್ರಿಶ್ಚಿಯನ್ನರು.

ಚೆನ್ನಮಾದನಾಯ್ಕನ ಗದ್ದೆಯಲ್ಲಿ ಪೈರನ್ನು ನಾಟಿಮಾಡುತ್ತಿದ್ದರು. ಮಧ್ಯಾಹ್ನಕ್ಕೆ ಊಟವನ್ನು ಈ ಸ್ತ್ರೀಯರು ಯಾರು ತಂದಿರಲಿಲ್ಲ. ದೂರವಾದ್ದರಿಂದ ಹೋಗಲು ಅವಕಾಶವೂ ಇರಲಿಲ್ಲ. ಬೇಸಿಗೆಯ ಬಿಸಿಲು ಬೆಂಕಿಯಂತೆ ಉರಿಯುತ್ತಿರುವುದು ಎಲ್ಲರಿಗೂ ತಿಳಿದ ವಿಷಯ.

ಚೆನ್ನಮಾದನು ಮನೆಯಲ್ಲಿ ನಾಟಿಯವರಿಗೆಂದು ಸುಮಾರು 20-25 ದೊಡ್ಡ ದೊಡ್ಡ ಹಿಟ್ಟಿನ ಮುದ್ದೆಗಳನ್ನು ಮಾಡಿಸಿದ್ದನು. ಸರಿ, ಮಧ್ಯಾಹ್ನವಾಯಿತು. ಕುಕ್ಕೆಯಲ್ಲಿ ಹಿಟ್ಟು-ಸಾರು-ಮಜ್ಜಿಗೆಗಳೊಡನೆ ಗದ್ದೆಗೆ ತರಲಾಯಿತು. ಮಧ್ಯಾಹ್ನ ವಿಶ್ರಾಂತಿಗಾಗಿ ಬಿಡುವುಕೊಡುವಾಗ ಊಟ ಮಾಡುವುದು ವಾಡಿಕೆ. ಅದರಂತೆ ಬಿಡುವು ಕೊಡಲಾಯಿತು. ಊಟಕ್ಕೆ ಕರೆದರೆ ಬರುವವರೇ ಇಲ್ಲ. 4-5 ಸ್ತ್ರೀಯರು ಮಾತ್ರ ಊಟ ಮಾಡಿದರು.

ಉಳಿದವರೆಲ್ಲಾ ಒಕ್ಕೊರಲಿನಿಂದ, ಗಗನವನ್ನು ಮುಟ್ಟುವವರೆಗೇ, ನಾವು, ನಿಮ್ಮವರ ಮನೆಯಲ್ಲಿ ಊಟ ಮಾಡೊಲ್ಲ. ನಾವ್ ಗಂಗ್ಡಕಾರ ಗೌಡಗಳು. ಕಷ್ಟ ಬಂದಾಗ ಕ್ರಿಶ್ಚನ್ ಜಾತಿಗೆ ಸೇರ್ಕಂಡಿವಿ. ಆದರೂ ನಮ್ಮ ಜಾತಿ ಬಿಡಲ್ಲ. ನಾವ್ಯಾರು ನಾಯ್ಕರ ಮನೇಲಿ ಊಟ ಮಾಡೊಲ್ಲ. ಮಜ್ಜಿಗೆ ಕುಡಿತೀವಿ ಕಾಫಿ-ಗೀಫಿ ಕಾಯ್ಸಕೊಟ್ರೆ ಕುಡೀತೀವಿ' ಎಂದು ಸಾರಿಯೇ ಬಿಟ್ಟರು.

ಹಿಂದೆ ಮತ್ತು ಇಂದು ಸಹ ಹಿಂದು ಧರ್ಮ ಜಾತೀಯತೆಯಿಂದ ತುಂಬಿ ಮಾನವರನ್ನೇ ಮೇಲು ಕೀಳು ಎಂದು ಬಗೆಯುತ್ತಿದೆ. ಆದರೆ ಮಾನವರಾಗಿ ಬಾಳಬೇಕು, ಮಾನವತೆಯು ಸರ್ವರಿಗೂ ಇದೆ ಎಂಬುದು ಕ್ರೈಸ್ತಧರ್ಮದ ತತ್ವ. ಆದರೆ ಈ ಬತ್ತದ ನಾಟಿಗೆ ಬಂದಿದ್ದ ಸ್ತ್ರೀಯರು ಹೀಗೆ ಮಾಡುವುದೇ ? ಭಾನುವಾರ ಚರ್ಚಿಗೆ ಹೋಗುತ್ತಾರೆ. ಕೇಳುವುದೇನು ? ಮಾಡುವುದೇನು ?

—ಎಚ್. ಎನ್. ರಾಮಚಂದ್ರ
ಹೆಗ್ಗಡಾಪುರ

(ಸೌಜನ್ಯ : ದೂತ)

# ದಲಿತವಿದ್ಯಾರ್ಥಿಗಳ ಹೊಣೆ

ವಿನಃ ಡಾ॥ ಅಂಬೇಡ್ಕರರ Those who suffer from inequality will blow up the structure of Political Democracy ಎಂಬ ಮಾತು ಸಾರ್ಥಕವಾಗದು.

ಇವೊತ್ತಿನ ಬಹು ಸಂಖ್ಯಾತ ದಲಿತರಲ್ಲಿ ಅವರು ವಿದ್ಯಾರ್ಥಿ ಜೀವನದಿಂದಹೊರಬಂದುನೌಕರಿಹಿಡಿದು ಉದ್ಯೋಗಸ್ಥರಾದ ಮೇಲೆ ಅಷ್ಟಕ್ಕೇ ತೃಪ್ತರಾಗಿ ಬಿಡುವ ಪ್ರವೃತ್ತಿ ಎಲ್ಲೆಡೆ ಕಂಡು ಬರುತ್ತದೆ. ಅಂಥವರು ದಯಮಾಡಿ ತಾವು ನಡೆದು ಬಂದ ಹಾದಿಯನ್ನೊಮ್ಮೆ ಹಿಂದಿರುಗಿ ನೋಡಲಿ. ತಮ್ಮ ನೌಕರಿಯೊಂದಿಗೆ ದಲಿತರ ಕಷ್ಟಗಳೆಲ್ಲವೂ ಕೊನೆಗೆಂಡವು ಎಂದು ಭ್ರಮಿಸದೆ ಆ ಹಾದಿಯಲ್ಲಿ ದಟ್ಟವಾಗಿರುವ ಕಲ್ಲು ಮುಳ್ಳುಗಳನ್ನು ತೆಗೆದು ಸ್ವಚ್ಛ ಮಾಡಬೇಕಾಗಿದೆ. ಈ ನೈತಿಕ ಪ್ರಜ್ಞೆ ಇಲ್ಲದವರು ದಲಿತರು ಎಂಬ ಹೆಸರಲ್ಲಿ ಸೌಲಭ್ಯ ಪಡೆಯುವುದು ಅನುಚಿತವಾದೀತು.

ಇತರರ ಹಾಗಲ್ಲದೆ ದಲಿತ ವಿದ್ಯಾರ್ಥಿಗಳಿಂದು ಇತಿಹಾಸದ ಬಹು ಸೂಕ್ಷ್ಮ ಸ್ತರದಲ್ಲಿದ್ದಾರೆ. ಹಿಂದಿನ ಮತ್ತು ತಮ್ಮ ಮುಂಬರುವ ತಲೆಮಾರುಗಳ ನಡುವಿನಲ್ಲಿ, ಶಿಕ್ಷಣ ಪಡೆದ ಇವರು ಹೊಸ ಮಣ್ಣಿನ ಪ್ರಥಮ ಹಂತದ ಹುಲುಸಾದ ಬೆಳೆಗಳು. ಆದ್ದರಿಂದ ಮೀಸಲಾತಿ ಇಲ್ಲದ ಸಂದರ್ಭದಲ್ಲೂ ಮೆರೆಯಬಲ್ಲ ಪ್ರತಿಭೆ, ಸಾಮರ್ಥ್ಯಗಳನ್ನು ರೂಢಿಸಿಕೊಳ್ಳುವುದು ಅಗತ್ಯ. ಮೀಸಲಾತಿ ಎಂಬುದು ಕೇವಲ ಕೆಲವೇ ವರ್ಷಗಳವರೆವಿಗಾಗಿ ನಿಗದಿಗೊಂಡಂಥ ಒಂದು ರಿಯಾಯಿತಿ ವ್ಯವಸ್ಥೆ ಅಷ್ಟೆ. ಇಂದು ಹೇಳಿ ಕೇಳಿ ಓಟಿನ ಬಲಾಬಲಗಳ ಮೇಲೆ ಆಳ್ವಿಕೆ ನಡೆಸುವ ಸಂದರ್ಭವಾಗಿರುವುದರಿಂದ ಹಾಗೂ ದಲಿತರೇ ಆಳುವ ಪಕ್ಷದ 'ಫಿಕ್ಸೆಡ್ ಡಿಪಾಜಿಟ್' ಅಥವಾ ಓಟ್ ಬ್ಯಾಂಕ್‌ಗಳಾಗಿರುವುದರಿಂದ ಅಲ್ಲದೆ ಹೆಂಡ ಬಟ್ಟೆ ಹಣ ಮೊದಲಾದ ರಾಜಕೀಯ ಆಮಿಷವೊಡ್ಡಿ ಓಟು ಅಪಹರಿಸುವ ಚೋರ್ ಪದ್ಧತಿ ಇರುವುದರಿಂದ ಮೀಸಲಾತಿಯೂ ಇದೆಯೇ ವಿನಃ ಆತ್ಮಸಾಕ್ಷಿಯ ಕಳಕಳಿಯಿಂದಂತೂ ಖಂಡಿತ ಅಲ್ಲ. ಇತ್ತೀಚೆಗೆ 'ಮತಾಂತರ' ದ ಬಿಸಿಯ ನಂತರವಂತೂ ಮೀಸಲಾತಿಯನ್ನು ಬಹಿರಂಗದಲ್ಲಿ ವಿರೋಧಿಸುತ್ತಿದ್ದ ಕೆಲವು ಪ್ರತಿಗಾಮಿ ರಾಜಕೀಯ ಪಕ್ಷಗಳೂ ಸಹ ತಮ್ಮ ಪ್ರಣಾಳಿಕೆಗಳಲ್ಲಿ ಮೀಸಲಾತಿಯನ್ನು ಬೆಂಬಲಿಸಿ ಒಳಗೊಳಗೆ ಮದ್ದು ಅರೆಯುತ್ತಿವೆ. ಅಸ್ಪೃಶ್ಯತೆಯ ಬಗ್ಗೆ ಕೂಡ ಅವು ಎಂದೂ ಇಲ್ಲದ ಗದ್ದಲ ಮಾಡುತ್ತಿವೆ. ಅದರ ನಿವಾರಣೆಗಾಗಿ ಕಂಡ ಕಂಡಲ್ಲಿ ಹರಿ/ಗಿರಿಜನರ ಸಮ್ಮೇಳನ ನಡೆಸುತ್ತಿವೆ. ಇಂಥವರ ಕಳಕಳಿ ದಲಿತರ ಬಗ್ಗೆ ಯಾವಲ್ಲಿ ಇದೆ ಎಷ್ಟು ಇದೆ ಎಂಬುದನ್ನು ದಲಿತರು, ವಿದ್ಯಾರ್ಥಿಗಳು ಅರ್ಥ ಮಾಡಿಕೊಳ್ಳಬೇಕು. ಹೀಗೆ ಮೀಸಲಾತಿಯ ಹಿನ್ನೆಲೆಯಲ್ಲಿ ನೋಡಿದಾಗ ಈಗಿನಿಂದಲೇ ಸ್ಪರ್ಧಾ ಮನೋಭಾವನೆ ಬೇಕು.

ಜೀವನದ ವಿವಿಧ ಹಂತಗಳಲ್ಲಿ ಎಲ್ಲರೂ ವಿದ್ಯಾರ್ಥಿಗಳೇ. ಆದರೆ ಶತಶತಮಾನಗಳಿಂದಲೂ ಅಕ್ಷರದ ಬೆಳಕನ್ನೆ ಕಾಣದೆ ಕತ್ತಲೆಯ ಜನರ ಮಕ್ಕಳು ಕೇವಲ ಅಕ್ಷರ ವಿದ್ಯೆಯ ವಿದ್ಯಾರ್ಥಿಗಳು ಅಂದರೆ Literates ಮಾತ್ರವಾಗದೆ ನೈಜ ಅರ್ಥದಲ್ಲಿ Educated ಆಗುವ ಅಗತ್ಯ ಬಹಳ ಇದೆ.

ರಾಷ್ಟ್ರೀಯ ಮಟ್ಟದಲ್ಲಿ, ಆರ್ಥಿಕ ಅಂಶಗಳ ಬಗ್ಗೆ ಹೇಳುವುದಾದರೆ, ಭೂಮಿ ಮತ್ತು ಕೈಗಾರಿಗಳು ರಾಷ್ಟ್ರೀಕರಣಗೊಂಡು ಪ್ರಜೆಗಳ ನಡುವೆ ಸಮನಾಗಿ ಹಂಚಿಕೆಯಾಗುವುದರ ಔಚಿತ್ಯ ಮತ್ತು ಖಾಸಗಿ ಆಸ್ತಿ ಹಕ್ಕು ರದ್ದತಿಯಿಂದಾಗುವ ಲಾಭಗಳನ್ನು ಮನಗಾಣಬೇಕು. ಆಗ ಸರ್ಕಾರ ಯಾವುದೇ ಮೀಸಲಾತಿ, ರಿಯಾಯಿತಿ ಮುಂತಾದುವುಗಳನ್ನು ಕೊಡುವ ಅಗತ್ಯ ಬೀಳುವುದಿಲ್ಲ. ಅಷ್ಟೆ ಅಲ್ಲ ಈ ಶಿಕ್ಷಣಾತ್ಮಕ ಬೇಧದಿಂದ ಕುದಿಗೊಂಡು ಕೊಲೆಗಳಲ್ಲಿ ಮಾನಭಂಗಗಳಲ್ಲಿ ತಮ್ಮ ಮತ್ಸರವನ್ನು ಪೂರೈಸಿಕೊಳ್ಳುವ, ಮೀಸಲಾತಿ ಪಡೆಯುವ ಹರಿಜನರನ್ನು ಮಾತ್ರ ಸರ್ಕಾರಿ ಬ್ರಾಹ್ಮಣರೆಂದು ಕರೆಯುವ, ನೂರಕ್ಕೆ 92 ರಷ್ಟು ಮೇಲ್ಜಾತಿ ಮೇಲ್ವರ್ಗದವರೇ ತುಂಬಿಕೊಂಡಿದ್ದಾಗ್ಯೂ ಆಡಳಿತ ದಕ್ಷತೆ, ನೈಪುಣ್ಯ ಕುಸಿಯುತ್ತಿದೆ ಎಂಬ ಹುಸಿ ಆರೋಪಗಳು ತಪ್ಪುವ ಸಾಧ್ಯತೆಗಳ ಬಗ್ಗೆ ದಲಿತ ವಿದ್ಯಾರ್ಥಿಗಳು ತೀವ್ರವಾಗಿ ಆಲೋಚಿಸಬೇಕಾಗಿದೆ.

(ಮೈಸೂರಿನ ದಲಿತ ವಿದ್ಯಾರ್ಥಿ ಒಕ್ಕೂಟದ ಸಭೆಯಲ್ಲಿ ಮಾಡಿದ ಭಾಷಣದಿಂದ)

KRNN 106 PANCHAMA FortNightly 5th April 1983 Reg. NO 2561/76

# 'ರಾಜಕೀಯ ಪ್ರಜ್ಞೆಯಿಂದ ಮಾತ್ರ ದಲಿತರ ಉದ್ಧಾರ'

ಕರುಣಂರಾಮಚಂದ್ರರಾವ್ ಆಂಧ್ರ ಪ್ರದೇಶದ ಪ್ರಸ್ತುತ ಗ್ರಾಮೀಣ ಮತ್ತು ಪಂಚಾಯ್ತಿ ರಾಜ್ಯ ಖಾತೆಯ ಸಚಿವರು. ಇಂದಿರಾಗಾಂಧಿ ಆಂಧ್ರದಲ್ಲಿ ಸ್ಪರ್ಧಿಸಿ-ಗೆದ್ದ ಮೇಧಕ್ ಕ್ಷೇತ್ರದಿಂದ ಇವರು ಆಯ್ಕೆಯಾಗಿ ಬಂದವರು. ಉಸ್ಮಾನಿಯಾ ವಿಶ್ವ ವಿಧ್ಯಾನಿಲಯ"ದಿಂದ ಪದವಿ ಪಡೆದನಂತರ 1964 ರಲ್ಲಿ ಪಕ್ಷೇತರ ಅಭ್ಯರ್ಥಿಯಾಗಿ, ಆಯ್ಕೆಯಾಗಿ ಆಂಧ್ರದ ರಾಜಕೀಯ ರಂಗಕ್ಕೆ ಪಾದಾರ್ಪಣೆ ಮಾಡಿದರು. 1978 ರ ವಿಧಾನಸಭಾ ಚುನಾವಣೆಯಲ್ಲಿ ಅರಸು ಕಾಂಗ್ರೆಸ್ ಟಿಕೆಟ್‌ನಿಂದ ಸ್ಪರ್ಧಿಸಿದ ಈತ ಪರಾಜಯ ಹೊಂದಿದರು. ಆಂಧ್ರದಲ್ಲಿ ಮೊಟ್ಟ ಮೊದಲಿಗೆ ಕಾಂಗ್ರೆಸ್ ಸಂಸ್ಕೃತಿಯನ್ನು ಕಿತ್ತೊಗೆದ 1982 ರ ಚುನಾವಣೆಯಲ್ಲಿ ತೆಲುಗುದೇಶಂ ಪಕ್ಷದಿಂದ ಆರಿಸಿಬಂದ ಇವರು ಈಗ ಆಂಧ್ರದ ಕ್ಯಾಬಿನೆಟ್ ಸಚಿವರು. ದಕ್ಷಿಣ ರಾಜ್ಯಗಳ ಪಂಚಾಯಿತಿ ಪರಿಷತ್ ಸಮ್ಮೇಳನಕ್ಕೆ ಇತ್ತೀಚೆಗೆ ಇವರು ಮೈಸೂರಿಗೆ ಆಗಮಿಸಿದ್ದಾಗ ದಲಿತರು ಮತ್ತು ಅಲ್ಪಸಂಖ್ಯಾತರನ್ನು ದೃಷ್ಟಿಯಲ್ಲಿಟ್ಟುಕೊಂಡು ನಾನು ಮತ್ತು ಮಿತ್ರ, ಹರೀಶ್ ಸಚಿವರನ್ನು ಸಂದರ್ಶಿಸಿದೆವು.

"ಕಾಂಗ್ರೆಸ್ ದಲಿತರಿಗೆ ಯಾವುದೇ ಬಗೆಯ ರಕ್ಷಣೆಯನ್ನು ಖಂಡಿತವಾಗಿಯೂ ನೀಡಿಲ್ಲ. ಕರ್ನಾಟಕದ ರಾಜಕೀಯದಂತೆ ಆಂಧ್ರದಲ್ಲೂ ಕಾಂಗ್ರೆಸ್‌ನಿಂದ ಬೇಸತ್ತ ಜನಕ್ಕೆ ಬದಲಿ ವ್ಯವಸ್ಥೆ ಎಂದರೆ, 'ತೆಲುಗು ದೇಶಂ' ಪಕ್ಷವನ್ನು ಆರಿಸುವುದೇ ಆಗಿತ್ತು. ತಿಂಗಳಿಗೊಬ್ಬ, ವರ್ಷಕ್ಕೊಬ್ಬ ಮುಖ್ಯಮಂತ್ರಿಯನ್ನು ಬದಲಾಯಿಸುತ್ತಾ, ದಲಿತರು ಮತ್ತು ಮುಸ್ಲೀಮರು ತಮ್ಮ ಪಕ್ಷದ ಓಟುಗಳ ಬ್ಯಾಂಕೆಂದು ಸಾರುತ್ತಾ ಯಾವುದೇ ಪ್ರ ಗ ತಿ ಪ ರ ಕಾರ್ಯಕ್ರಮಗಳನ್ನು ಕಾಂಗ್ರೆಸ್ ಸರ್ಕಾರ ಕೈಗೊಂಡಿರಲಿಲ್ಲ. ಕಾಂಗ್ರೆಸ್‌ಸರ್ಕಾರ ದಲಿತರನ್ನು ಉದ್ಧಾರ ಮಾಡುವ ಆಕಾಂಕ್ಷೆ ಇದ್ದರೆ, ಇಷ್ಟು ದಿನ ಬೇಕಾಗಿರಲಿಲ್ಲ. ಕಾಂಗ್ರೇಸ್ ಸಂಸ್ಕೃತಿ ಒಂದು ಹೊಲಸು ಸಂಸ್ಕೃತಿ" ಎಂದ ರಾಮಚಂದ್ರ ರಾವ್ ಅವರು 'ತೆಲುಗುದೇಶಂ'ನ ಗೆಲುವಿಗೆ ದಲಿತರೆ ನಿಜವಾಗಿಯು ಕಾರಣರು ಎಂದರು. ಮುಂದುವರೆದು, ದಲಿತರು ಆಂಧ್ರದಲ್ಲಷ್ಟೆ ಅಲ್ಲ ಇಡೀ ಇಂಡಿಯಾದ ರಾಜಕೀಯದಲ್ಲೇ ಅವರೊಂದು ಶಕ್ತಿ ಎಂದರು ದಲಿತರು ಪ್ರಜ್ಞಾವಂತರಾದಾಗ ತಮಗೆಂತ ರಾಜಕೀಯ ವ್ಯವಸ್ಥೆ ಬೇಕು ? ಎಂದು ಆಲೋಚಿಸುತ್ತಾರೆ. ಕರ್ನಾಟಕದ ಒಕ್ಕಲಿಗರು ಮತ್ತು ಲಿಂಗಾಯಿತರಂತೆ ಆಂಧ್ರದಲ್ಲೂ "ಕಮ್ಮ" ಮತ್ತು "ರೆಡ್ಡಿ" ಎಂಬ ಮೇಲ್ಜಾತಿ ಜನರ ದಬ್ಬಾಳಿಕೆ ಎಲ್ಲಾ ಕ್ಷೇತ್ರಗಳಲ್ಲೂ ಇದೆ ಎಂದರು. ಆಂಧ್ರದ ಒಟ್ಟು ಜನಸಂಖ್ಯೆಯಲ್ಲಿ 19./. ರಷ್ಟು ದಲಿತರು 5./ ರಷ್ಟು ಮುಸ್ಲೀಮರು 3./. ರಷ್ಟು ಕ್ರಿಶ್ಚಿಯನ್ನರು ಇದ್ದಾರೆ. ಇವರೆಲ್ಲ ಒಂದುವೇಳೆ ಕಾಂಗ್ರೆಸ್ ಪರವಾಗಿದ್ದಿದ್ದರೆ, ತೆಲುಗುದೇಶಂ ಪಕ್ಷದ ಗೆಲುವು ಕನಸಾಗುತ್ತಿತ್ತು ಎನ್ನುತ್ತಾರೆ.

ಕಾಂಗ್ರೆಸ್ ದಲಿತರ ಪರವಾಗಿಲ್ಲ ಎನ್ನುವ ನೀವು ನಿಮ್ಮ ಸರ್ಕಾರದಿಂದ ದಲಿತರಿಗಾಗಿ ಮುಸ್ಲೀಮರಿಗಾಗಿ ಏನು ಮಾಡುತ್ತಿದ್ದೀರಿ ? ಎಂಬ ನನ್ನ ಪ್ರಶ್ನೆಗೆ ಉತ್ತರವಿತ್ತ ಅವರು ದಲಿತರಿಗಾಗಿ ಯಾವುದೇ ರಾಜಕೀಯ ಪಕ್ಷ ಏನು ಮಾಡಿದರೂ ಅದರ ಉದ್ದೇಶವೇ ಬೇರೆಯಾಗಿರುತ್ತದೆ ಎಂದು ನಿರ್ಧಿಷ್ಟವಾಗಿ ಹೇಳಬಲ್ಲೆ ಎಂದರು. ಕಾಂಗ್ರೆಸ್‌ಗಿಂತ ದಲಿತರ

## ತೆಲುಗು ದೇಶಂ ಸಚಿವರೊಂದಿಗೆ ಸಂದರ್ಶನ

ಉದ್ಧಾರದ ಹಾದಿಯಲ್ಲಿ ನಾವು ಒಂದು ಹೆಜ್ಜೆ ಮುಂದಿದ್ದೇವೆ ಎನ್ನಬಹುದು ಅಷ್ಟೆ. ಏನೇ ಆದರು ದಲಿತರ ಉದ್ಧಾರ ದಲಿತರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರಜ್ಞೆಯಿಂದಲೇ ಮಾತ್ರ ಸಾಧ್ಯ. ದಲಿತರಿಗೆ ಶಿಕ್ಷಣವೇ ನಿಜವಾದ ಒಂದು ಆಸ್ತಿ. ದಲಿತರನ್ನು ವಿದ್ಯಾವಂತರನ್ನಾಗಿ ಮಾಡುವುದೇ ಯಾವುದೇ ಸರ್ಕಾರದ ಮೊದಲ ಕಾರ್ಯವಾಗಿರಬೇಕು ಎಂದರು. ಆಂಧ್ರದಲ್ಲಿ ದಲಿತರ ಮತ್ತು ಅಲ್ಪ ಸಂಖ್ಯಾತರ ಆರ್ಥಿಕ ಪರಿಸ್ಥಿತಿ ಭಾರತದ ಎಲ್ಲ ಪ್ರದೇಶದಲ್ಲೂ ಇರುವಂತೆ ಇದ್ದರೂ ಅಸ್ಪೃಶ್ಯತೆ ಅಷ್ಟಾಗಿಲ್ಲ ಎನ್ನುತ್ತಾರೆ. ಅಸ್ಪೃಶ್ಯತೆ ನಮ್ಮ ಸಮಾಜದಿಂದ ತೊಲಗದ ಹೊರತು ಜಾತಿ ತೊಲಗುವುದಿಲ್ಲ. ಜಾತಿ ತೊಲಗಿದರೆ ಮಾತ್ರವೇ ದಲಿತರ, ಅಷ್ಟೆ ಏಕೆ, ಭಾರತದ ನಿಜವಾದ ವಿಮೋಚನೆ ಎನ್ನುತ್ತಾರೆ. ಸಂವಿಧಾನ ಬದ್ಧರಕ್ಷಣೆ, ಮೀಸಲಾತಿ ಪರಿಸ್ಥಿತಿ ಆಂಧ್ರದಲ್ಲಿ ಹೇಗಿದೆ ? ಎಂದಾಗ, ಮೀಸಲಾತಿಯನ್ನು ಸರಿಯಾಗಿ ಕಾಪಾಡಿಕೊಂಡು ಹೋಗಲು ನಾವು ಪ್ರಯತ್ನಿಸುತ್ತೇವೆ ಎಂದರು. "ಮೆರಿಟ್" "ಮೆರಿಟ್" ಎನ್ನುವ ಎನ್.ಟಿ.ಆರ್. ದಲಿತರ ಮೀಸಲಾತಿಯನ್ನು ಎಷ್ಟರಮಟ್ಟಿಗೆ ಕಾಪಾಡಬಲ್ಲರು ? ಎಂದಾಗ ಇಂಡಿಯಾದಲ್ಲಿ ಎನ್.ಟಿ. ಆರ್. ರವರಾಗಲಿ ಯಾವುದೇ ಪಕ್ಷದವರಾಗಲೀ, "ಅಸ್ಪೃಶ್ಯತೆ, ಜಾತಿ, ಬದುಕಿರುವವರೆವಿಗೂ ಮೀಸಲಾತಿ ಮುಂದುವರೆಯಲೇ ಬೇಕು". ಕೇವಲ 18 ರಷ್ಟು ಮೀಸಲಾತಿ ಒಂದೇ ದಲಿತರನ್ನು ಮೇಲೆತ್ತುತ್ತದೆ ಎನ್ನುವುದು ಒಂದು ಆಶಾಭಾವನೆ ಅಷ್ಟೆ. ಲಕ್ಷಕ್ಕೆ ಒಬ್ಬ ಮೀಸಲಾದರೆ ಏನು ಪ್ರಯೋಜನ ? ಎಂದು ಕೇಳುತ್ತಾರೆ. ಕರ್ನಾಟಕದಲ್ಲಿ ದಲಿತ ಚಳವಳಿ, ಮಹರಾಷ್ಟ್ರದ ಪ್ಯಾಂಥರ್ಸ್ ಚಳುವಳಿಯಂತೆ, ಆಂಧ್ರದಲ್ಲಿ ಚಳುವಳಿ ಇದೆಯೆ ? ಎಂಬ ಚರ್ಚೆ ಬಂದಾಗ 'ಇಲ್ಲ' ಎಂದು ಉತ್ತರ ಕೊಟ್ಟರು, ದಲಿತರಿಗೆ ಸಂಘಟನೆ ತೀರ ಅವಶ್ಯಕ. ದಲಿತರ ಸಮಸ್ಯೆಗಳು ಜೀವಂತ ವಿರುವವರೆವಿಗೂ ಅವು ಬೇಕೆಬೇಕು. ಆಂಧ್ರದಲ್ಲಿ ದಲಿತರ ಸಮಸ್ಯೆಗಳು ಇದ್ದರೂ, ದೌರ್ಜನ್ಯ ಅಷ್ಟಾಗಿಲ್ಲದಿದ್ದರಿಂದ ಅಲ್ಲಿ ಸಂಘಟನೆಗಳು ಬೆಳೆದೇ ಇಲ್ಲ ಎಂದರು.

ಆಂಧ್ರದಲ್ಲಿ ದಲಿತ–ಸವರ್ಣಿಯರ ತಿಕ್ಕಾಟಕ್ಕಿಂತಲೂ ಹಿಂದೂ ಮುಸ್ಲೀಮರ ತಿಕ್ಕಾಟವೇ ಅಧಿಕ. ಏಕೆ ? ಎಂದಾಗ ಕೆಲವೇ ಕಡೇ ಮುಸ್ಲೀಮರು ಹೆಚ್ಚಾಗಿರುವುದು, ಮತಬೇಧ, ಉಳ್ಳ ಜಾತಿಗಳ ದಬ್ಬಾಳಿಕೆಯ ಜೊತೆಗೆ ರಾಜಕೀಯ ಶಕ್ತಿಗಳ ನಿರಂತರ ಕೈವಾಡ ಎಂದರು. ಉದಾ : ಇತ್ತೀಚೆಗೆ ನಡೆದ ಘರ್ಷಣೆಗೆ ಕಾರಣ ಬಿ.ಜೆ.ಪಿ. ಯ ಅಭ್ಯರ್ಥಿಯೊಬ್ಬ ಚುನಾವಣೆಯಲ್ಲಿ ಪರಾಜಯ ಹೊಂದಿದ್ದೆ ಕಾರಣ ಎಂದರು. ದಲಿತರ ಹೆಸರಲ್ಲಿ ದಲಿತರನ್ನೇ ನಿರ್ನಾಮಮಾಡುತ್ತಿದ್ದ ಕಾಂಗ್ರೆಸ್‌ಗೆ ದಲಿತರೇಬುದ್ಧಿ ಕಲಿಸಿದ್ದಾರೆ ಎಂದರು.

ಎನ್.ಟಿ.ಆರ್. ದಲಿತರ ಮತ್ತು ಅಲ್ಪಸಂಖ್ಯಾತರ ಪರ ಕೆಲಸ ಮಾಡಬಲ್ಲರೆ ? ಎಂಬ ಪ್ರಶ್ನೆಗೆ ಒಮ್ಮೆ ನಕ್ಕ ರಾಮಚಂದ್ರ ರಾವ್ "ಮೊದಲೇ ಹೇಳಿದೆನಲ್ಲ ದಲಿತರ ಉದ್ಧಾರ ದಲಿತರ ಕೈಯ್ಯಲ್ಲೇ ಇದೆ. ಯಾರೋ ತಮ್ಮ ಅಭಿವೃದ್ಧಿ ಮಾಡುತ್ತಾರೆ ಎಂದು ಅವರು ಯಾವಾಗಲು ನಿರೀಕ್ಷಿಸಬಾರದು. ಹಾಗಿದ್ದರೆ ದಲಿತ ರಾಜಕಾರಣಿಗಳೇ ದಲಿತರನ್ನು ಉದ್ಧಾರ ಮಾಡಿ ಬಿಡಬಹುದಿತ್ತು. ಒಟ್ಟಾರೆ ತೆಲಗುದೇಶಂ ದಲಿತರ ಪರವಾಗಿದೆ ಎನ್ನಬಲ್ಲೆಂದರು. ಹಾಗಾದರೆ ದಲಿತರನ್ನು ಮುಸ್ಲೀಮರನ್ನು ಏಕೆ ಮುಖ್ಯಮಂತ್ರಿಯನ್ನಾಗಿ ಮಾಡಲಿಲ್ಲ ? ಎಂದ ನನ್ನ ಪ್ರಶ್ನೆಗೆ ಕರ್ನಾಟಕದಲ್ಲೇ ಮಾಡಬಹುದಿತ್ತಲ್ಲ ? ಎಂದು ಮರು ಪ್ರಶ್ನೆ ಹಾಕಿದರು. ಬಹುಸಂಖ್ಯಾತರ ಬಲ ಹೆಚ್ಚಿರುವರೆವಿಗೂ ಅಲ್ಪಸಂಖ್ಯಾತರ ಸಂಘಟನೆ ಬೆಳೆಯುವವರೆವಿಗೂ ನಿಮ್ಮ ಪ್ರಶ್ನೆ ಪ್ರಶ್ನೆಯೇ ಎಂದು ಹೇಳಿದರು.

ಸಂದರ್ಶನ ಲೇಖನ :–

ಹೆಚ್.ಎಸ್. ರಾಜೇಂದ್ರ ಸಿಂಗ್

ಆರ್. ಹರೀಶ್

ಸಂಪಾದಕ ಪ್ರಕಾಶಕ : ಗೋವಿಂದಯ್ಯ, ವಿನಯ ಪ್ರಿಂಟರಿ 2514, ಕೆ. ಜಿ. ಕೊಪ್ಪಲು, ಮೈಸೂರು–14